# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜೂನ್ ೯, ೨೦೧೬ ( ಜ್ಯೇಷ್ಠ ೧೯, ಶಕ ವರ್ಷ ೧೯೩೮)<br>Bengaluru, Thursday, June 9, 2016 ( Jyeishta 19, Shaka Varsha 1938) | ಸಂಚಿಕೆ ೨೩<br>Issue 23 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಇಲಾಖೆ

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು-52.**

**ವಿಷಯ :** ಸಿಂಪ್ಸನ್ ಮತ್ತು ತಂಡದ ಕಂಪನಿಗಳ ನೌಕರರ ಸಗಟು ಮಾರಾಟ ಸಹಕಾರ ಸಂಘ ನಿ., ಬೆಂಗಳೂರು, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**

1. ಈ ಕಛೇರಿ ಆದೇಶದ ಸಂಖ್ಯೆ: ಬಳಕೆ-2/ಎಎನ್‌ಡಬ್ಲ್ಯೂಎಸ್/49/97-98, ದಿನಾಂಕ: 31-10-98.
2. ಸಂಘದ ಸಮಾಪನಾಧಿಕಾರಿಗಳ ಪ್ರಸ್ತಾವನೆ ದಿ: 18-08-2015, 29-09-2015 ಮತ್ತು 14-10-2015.
3. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಇವರ ಪತ್ರದ ಸಂಖ್ಯೆ: ಜೆಆರ್‌ಬಿ/ಸಮಾಪನೆ/25/2015-16, ದಿನಾಂಕ:07-10-2015.
4. ಈ ಕಛೇರಿಯ ಆದೇಶದ ಸಂಖ್ಯೆ: ಸಸಂನಿ/ಸಮಾಪನೆ/37/2015-16, ದಿನಾಂಕ: 20-10-2015.
5. ಈ ಕಛೇರಿ ಸಮಸಂಖ್ಯೆ ಆದೇಶದ ದಿನಾಂಕ: 20-10-2015.
6. ಈ ಕಛೇರಿ ಸಮಸಂಖ್ಯೆ ನೋಟೀಸ್ ದಿನಾಂಕ: 13-04-2016.

**ಪ್ರಸ್ತಾವನೆ :-**

ಸಿಂಪ್ಸನ್ ಮತ್ತು ತಂಡದ ಕಂಪನಿಗಳ ನೌಕರರ ಸಗಟು ಮಾರಾಟ ಸಹಕಾರ ಸಂಘ ನಿ., ಬೆಂಗಳೂರು, ಈ ಸಂಘವನ್ನು ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಸಮಾಪನೆಗೊಂಡ ನಂತರ ಸಂಘದ ಸಮಾಪಕರು ಸಮಾಪನಾ ಪ್ರಕ್ರಿಯೆಯನ್ನು ಮುಂದುವರಿಸಿದ್ದರು.

ಏತನ್ಮಧ್ಯೆ ಸಂಘದ ಸಮಾಪಕರು ಉಲ್ಲೇಖ (2) ರ ಪತ್ರಗಳ ಮೂಲಕ ಸಂಘವನ್ನು ಪುನಃಶ್ಚೇತನಗೊಳಿಸಲು ವಿನಂತಿಸಿದ್ದರು. ಅವರ ವಿನಂತಿಯ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಸಹಕರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಇವರಿಗೆ ಸೂಚಿಸಲಾಗಿತ್ತು. ಉಲ್ಲೇಖ (3) ರ ಪತ್ರದನ್ವಯ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಇವರು ವರದಿ ಸಲ್ಲಿಸಿ ಸಮಾಪನೆಗೊಂಡಿರುವ ಸಂಘವನ್ನು ಪುನಃಶ್ಚೇತನಗೊಳಿಸುವಂತೆ ಶಿಫಾರಸ್ಸು ಮಾಡಿದ್ದರು.

ಸದರಿ ಶಿಫಾರಸ್ಸಿನನ್ವಯ ಉಲ್ಲೇಖ (4) ರ ಆದೇಶದಲ್ಲಿ ಷರತ್ತುಗಳನ್ನು ವಿಧಿಸಿ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಲಾಗಿರುತ್ತದೆ. ನಂತರ ಉಲ್ಲೇಖ (5) ರ ಆದೇಶದನ್ವಯ ಸಹಕಾರ ಸಂಘಗಳ ಅಧಿನಿಯಮ ಕಲಂ 28ಎ(5) ರ ಪ್ರಕಾರ 6 ತಿಂಗಳ ಅವಧಿಗೆ ಹಿಂದೆ ಸಮಾಪನಾಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದ ಅಧಿಕಾರಿಯನ್ನೇ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಸಂಘವನ್ನು ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಲಾಗಿರುತ್ತದೆ.

1) ಸಂಘದ ಆಡಳಿತಾಧಿಕಾರಿಯು ನಿಗಧಿತ ಕಾಲಮಿತಿಯೊಳಗೆ ಹೊಸ ಆಡಳಿತ ಮಂಡಳಿ ರಚಿಸಿ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಲು ಕ್ರಮವಿಡತಕ್ಕದ್ದು.
2) ಸಂಘದ ವ್ಯವಹಾರಗಳನ್ನು ನೋಡಿಕೊಳ್ಳಲು ಸಂಘಕ್ಕೆ ಸಿಬ್ಬಂದಿ ಅವಶ್ಯವಿದ್ದಲ್ಲಿ ಸಹಕಾರ ಸಂಘಗಳ ನಿಯಮ 17 ರಂತೆ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯುವುದು.
3) ಸಂಘವನ್ನು ಪುನಃಶ್ಚೇತನಗೊಳಿಸಿರುವುದರಿಂದ ಸಂಘದ ಪುನಃಶ್ಚೇಚನಕ್ಕೆ ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು.

ಉಲ್ಲೇಖ (4) ರ ಆದೇಶದಲ್ಲಿ ಪುನಃಶ್ಚೇತನಗೊಳಿಸಿದ ಆದೇಶದಲ್ಲಿನ ಷರತ್ತುಗಳನ್ನು ಹಾಗೂ ಉಲ್ಲೇಖ (5)ರಲ್ಲಿ ಆಡಳಿತಾಧಿಕಾರಿಗಳನ್ನು ನೇಮಿಸಿದ ಮೇಲ್ಕಂಡ ಯಾವುದೇ ಷರತ್ತುಗಳನ್ನು ಆಡಳಿತಾಧಿಕಾರಿಗಳು ಪಾಲಿಸದೇ ವಿಫಲರಾಗಿರುತ್ತಾರೆ.

ಈ ಹಿಂದೆ ಸಂಘವನ್ನು ಪುನಃಶ್ಚೇತನಗೊಳಿಸುವ ಸಂದರ್ಭದಲ್ಲಿ ಅಂದಿನ ಸಮಾಪಕರು ದಿ: 16–08–2015 ರಂದು ಸರ್ವಸದಸ್ಯರ ಸಭೆ ನಡೆಸಲಾಗಿದೆ ಎಂದು ತಿಳಿಸಿ ಸಮಾಪನೆಯನ್ನು ರದ್ದುಗೊಳಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿರುತ್ತಾರೆ. ಅದರನ್ವಯ ದಿ: 20–10–2015 ರ ಈ ಕಛೇರಿಯ ಆದೇಶದನ್ವಯ ಸಂಘವನ್ನು ಪುನಃಶ್ಚೇತನಗೊಳಿಸಲಾಗಿರುತ್ತದೆ.

ಪುನಃಶ್ಚೇತನಗೊಳಿಸಿದ ಆದೇಶ ಹೊರಡಿಸಿದ ಒಂದು ತಿಂಗಳ ಅವಧಿಯೊಳಗೆ ಮತ್ತೊಮ್ಮೆ ಸರ್ವ ಸದಸ್ಯರ ಸಭೆ, ನಡೆಸಿದೆ ಎಂದು ತಿಳಿಸಿ ಸಂಘವನ್ನು ಪುನಃಶ್ಚೇತನಗೊಳಿಸುವುದು ಕಷ್ಟಕರವೆಂದು ತಿಳಿಸಿರುತ್ತಾರೆ.

ಹಿಂದಿನ ಸರ್ವ ಸದಸ್ಯರ ಸಭೆ ನಡೆದ ಮೂರು ತಿಂಗಳಿನ ಅವಧಿಯಲ್ಲಿಯೇ ದಿನಾಂಕ: 07–11–2015 ರಂದು ನಡೆದಿದೆ ಎಂದು ತಿಳಿಸಿರುವ ಸರ್ವ ಸದಸ್ಯರ ಸಭಾ ನಡವಳಿಯಲ್ಲಿ ಇಂದಿನ ಸ್ಪರ್ಧಾತ್ಮಕ ಮಾರುಕಟ್ಟೆ ಪ್ರಪಂಚದಲ್ಲಿ ಸಹಕಾರ ಸಂಘವು ನಡೆಯುವುದು ಕಷ್ಟಕರವೆಂದು ಕರ್ನಾಟಕ ರಾಜ್ಯ ಇಂಧನ ಸಹಕಾರ ಅಭಿವೃದ್ಧಿ ನಿಯಮಿತ, ಈ ಸಂಘದೊಂದಿಗೆ ವಿಲೀನಗೊಳಿಸಲು ತೀರ್ಮಾನಿಸಲಾಗಿದೆ ಎಂದು ತಿಳಿಸಲಾಗಿರುತ್ತದೆ, ಇದು ತೀವ್ರ ಆಕ್ಷೇಪಣೀಯ ಹಾಗೂ ಸರಿಯಾದ ಕ್ರಮವಲ್ಲ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959 ರ ರೀತ್ಯಾ 1 ವರ್ಷದ ಅವಧಿಯಲ್ಲಿ ಒಂದು ವಾರ್ಷಿಕ ಮಹಾ ಸಭೆ ನಡೆಸಲು ಮಾತ್ರ ಅವಕಾಶವಿರುತ್ತದೆ. ಆದರೆ 3 ತಿಂಗಳ ಕಾಲಾವಧಿಯಲ್ಲಿ ಎರಡು ಸರ್ವ ಸದಸ್ಯರ ಸಭೆ ಜರುಗಿಸಿದ್ದು, ದಿನಾಂಕ: 16–08–2015 ರ ಸರ್ವ ಸದಸ್ಯರ ಸಭೆಯಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸಲು ಮತ್ತು ದಿನಾಂಕ: 07–11–2015 ರ ಸರ್ವ ಸದಸ್ಯರ ಸಭೆಯಲ್ಲಿ ಸಂಘವನ್ನು ನಡೆಸುವುದು ಕಷ್ಟಕರವೆಂದು ನಿರ್ಣಯಿಸಿದ್ದು, ಈ ಎರಡು ನಿರ್ಣಯಗಳು ಒಂದಕ್ಕೊಂದು ವ್ಯತಿರಿಕ್ತ ವಿರೋಧಭಾಸದಿಂದ ಕೂಡಿದೆ.

ಈ ಹಿಂದೆ ಸಂಘವು ದಿನಾಂಕ: 30–11–1998 ರಲ್ಲಿ ಸಮಾಪನೆಗೊಂಡಿದ್ದು, ಸರಿ ಸುಮಾರು 17 ವರ್ಷಗಳ ನಂತರ ಸಂಘದ ಸರ್ವ ಸದಸ್ಯರ ಸಭೆಯು ಪುನಃಶ್ಚೇತನಕ್ಕೆ ನಿರ್ಧರಿಸಿದ ಕಾರಣ ಸಂಘದ ಉಪ ನಿಯಮಗಳ ರೀತ್ಯಾ ತನ್ನ ಧ್ಯೇಯೋದ್ದೇಶಗಳನ್ನು ಈಡೇರಿಸಿ ಮುನ್ನಡೆಯಬೇಕೆಂಬ ಉದ್ದೇಶದಿಂದ ಸಂಘವನ್ನು ಪುನಃಶ್ಚೇತನಗೊಳಿಸಲಾಗಿತ್ತು.

ಆದರೆ ಪುನಃಶ್ಚೇತನಗೊಂಡ ನಂತರ ಪುನಃಶ್ಚೇತನ ಆದೇಶದ ಷರತ್ತುಗಳ ರೀತ್ಯಾ ಸಂಘವು ಕಾರ್ಯ ನಿರ್ವಹಿಸಿರುವುದಿಲ್ಲ ಹಾಗೂ ಆಡಳಿತಾಧಿಕಾರಿಗಳು ಸಂಘವನ್ನು ಪುನಃಶ್ಚೇತನಗೊಳಿಸಲು ಯಾವುದೇ ಕ್ರಮ ತೆಗದುಕೊಂಡಿರುವುದಿಲ್ಲ ಹಾಗೂ ಈ ಬಗ್ಗೆ ಈ ಕಛೇರಿಗೆ ಯಾವುದೇ ಮಾಹಿತಿಯನ್ನು ಸಲ್ಲಿಸಿರುವುದಿಲ್ಲ. ಪುನಃಶ್ಚೇತನಗೊಂಡು ಒಂದು ತಿಂಗಳ ಅವಧಿಯೊಳಗೆ ಮತ್ತೊಂದು ವಾರ್ಷಿಕ ಮಹಾಸಭೆ ಜರುಗಿಸಿ ಸಂಘವನ್ನು ನಡೆಸುವುದು ಕಷ್ಟಕರವೆಂದು ವಿಲೀನಗೊಳಿಸಲು ನಿರ್ಧರಿಸಿರುವುದು ಸಮರ್ಥನೀಯವಲ್ಲ. ಏಕೆಂದರೆ ಸಂಘವನ್ನು ಸಮಾಪನೆಗೊಂಡು 17 ವರ್ಷಗಳ ನಂತರ ಪುನಃಶ್ಚೇತನಗೊಳಿಸಿ ತನ್ನ ಧ್ಯೇಯೋದ್ದೇಶಗಳನ್ನು ಈಡೇರಿಸಲಿ ಎಂಬ ದೃಷ್ಟಿಯಿಂದ ಪುನಃಶ್ಚೇತಗೊಳಿಸಲಾಗಿತ್ತು. ಆದರೆ ಪುನಃಶ್ಚೇತನದ ಉದ್ದೇಶ ಮತ್ತು ಆಶಯವನ್ನೇ ಕೈಬಿಟ್ಟು ಮತ್ತೊಂದು ಸಂಘದಲ್ಲಿ ವಿಲೀನಕ್ಕೆ ನಿರ್ಧರಿಸಿರುವುದು ಸಮಂಜಸವಲ್ಲ ಹಾಗೂ ಸಂಘದ ಸದಸ್ಯರಿಗೆ ಆಸಕ್ತಿ ಇಲ್ಲವೆಂದು ಮುಂದುವರೆಸುವುದು ಕಷ್ಟಕರವೆಂದು ಸರ್ವ ಸದಸ್ಯರ ಸಭೆಯಲ್ಲಿ ವ್ಯಕ್ತಪಡಿಸಿರುವುದರಿಂದ ಮೇಲೆ ತಿಳಿಸಿರುವ ಈ ಕಛೇರಿ ಆದೇಶದ ಷರತ್ತುಗಳನ್ನು ಪರಿಪಾಲಿಸದಿರುವುದು ಹಾಗೂ ಸಂಘವನ್ನು ಪುನಃಶ್ಚೇತನಗೊಳಿಸಲು ಸಂಘದ ಸದಸ್ಯರಿಗೆ ಆಸಕ್ತಿ ಇಲ್ಲದಿರುವುದು ಕಂಡು ಬರುತ್ತದೆ. ಸಹಕಾರ ಸಂಘಗಳ ಅಧಿನಿಯಮ, 1959ರ ಕಲಂ 28ಎ(5) ರ ಪ್ರಕಾರ ನೇಮಿಸಿರುವ ಆಡಳಿತಾಧಿಕಾರಿಗಳನ್ನು ಸಹಕಾರ ಸಂಘಗಳ ಅಧಿನಿಯಮ 28ಬಿ ರ ಪ್ರಕಾರ 6 ತಿಂಗಳ ಮಾತ್ರ ನೇಮಿಸಲು ಅವಕಾಶವಿರುತ್ತದೆ. ತದನಂತರದಲ್ಲಿ ಮುಂದುವರೆಸಲು ಕಾನೂನಿನಲ್ಲಿ ಯಾವುದೇ ಅವಕಾಶವಿರುವುದಿಲ್ಲ. ಸಂಘದ ಚುನಾವಣೆ ನಡೆಸಲು ವಿಫಲರಾಗಿರುವ ಕುರಿತು ಆಡಳಿತಾಧಿಕಾರಿಗಳಿಗೆ ಉಲ್ಲೇಖ (6) ರನ್ವಯ ಕಾರಣ ಕೇಳುವ ನೋಟೀಸ್ ನೀಡಲಾಗಿರುತ್ತದೆ. ಆದರೆ ವಿವರಣೆ ನೀಡಿರುವುದಿಲ್ಲ. ಆದ್ದರಿಂದ ಆಡಳಿತಾಧಿಕಾರಿಗಳು ಸಂಘವನ್ನು ಪುನಃಶ್ಚೇತನಗೊಳಿಸಲು ಯಾವುದೇ ಕ್ರಮ ಕೈಗೊಳ್ಳದಿರುವುದು, ಚುನಾವಣೆ ನಡೆಸಿ ಆಡಳಿತ ಮಂಡಳಿಯ ರಚಿಸಲು ಸಂಪೂರ್ಣ ವಿಫಲರಾಗಿರುವುದು, ಸಂಘವನ್ನು ನಡೆಸಲು ಸದಸ್ಯರಿಗೆ ಆಸಕ್ತಿ ಇಲ್ಲದೇ ಇರುವುದರಿಂದ, ಹಾಗೂ ಆಡಳಿತಾಧಿಕಾರಿಗಳ ಅವಧಿಯನ್ನು ಮುಂದುವರೆಸಲು ಅವಕಾಶವಿಲ್ಲದಿರುವುದರಿಂದ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತ ಹಾಗೂ ಸಮಂಜಸವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸಸಂಸನಿ/ಸಮಾಪನೆ/42/2015–16, ದಿನಾಂಕ: 18–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕಛೇರಿಯ ಉಲ್ಲೇಖ (4) ಮತ್ತು (5) ರ ರೀತ್ಯಾ ಸಂಘವನ್ನು ಪುನಃಶ್ಚೇತನಗೊಳಿಸಿರುವ ಹಾಗೂ ಆಡಳಿತಾಧಿಕಾರಿಗಳನ್ನು ನೇಮಕ ಮಾಡಿರುವ ಆದೇಶದಲ್ಲಿನ ಷರತ್ತುಗಳನ್ನು ಪಾಲಿಸದೆ ಇರುವ ಕಾರಣ ಮತ್ತು ಸಂಘದ ಸದಸ್ಯರಿಗೆ ಆಸಕ್ತಿ ಇಲ್ಲವೆಂದು ಸಂಘವನ್ನು ಮುಂದುವರೆಸುವುದು ಕಷ್ಟಕರವೆಂದು ಸರ್ವ ಸದಸ್ಯರ ಸಭೆಯಲ್ಲಿ ವ್ಯಕ್ತಪಡಿಸಿರುವುದರಿಂದ ಹಾಗೂ ಆಡಳಿತಾದಿಕಾರಿಗಳು ಸಂಘವನ್ನು ಪುನಃಶ್ಚೇತನಗೊಳಿಸಲು ಕ್ರಮ ಕೈಗೊಳ್ಳದಿರುವುದು, ಚುನಾವಣೆ ನಡೆಸಿ ಆಡಳಿತ ಮಂಡಳಿಯ ರಚಿಸಲು ಸಂಪೂರ್ಣ ವಿಫಲರಾಗಿರುವುದರಿಂದ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959 ರ ಕಲಂ 72(2)(ಬಿ)(ಸಿ) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ.ಕೆ.ಅಯ್ಯಪ್ಪ, ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು, ಆದ ನಾನು ಸಿಂಪ್ಸನ್ ಮತ್ತು ತಂಡದ ಕಂಪನಿಗಳ ನೌಕರರ ಸಗಟು ಮಾರಾಟ ಸಹಕಾರ ಸಂಘ ನಿ., ನಂ.59/1 (8–9), 1ನೇ ಅಡ್ಡ ರಸ್ತೆ, ಮಾಧವ ನಗರ, ಬೆಂಗಳೂರು–01, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 18–04–2016 ರಂದು ಹೊರಡಿಸಿರುತ್ತೇನೆ.

PR-382
SC-10

**ಎಂ.ಕೆ.ಅಯ್ಯಪ್ಪ,**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

## THE COMPANIES (COURT) RULES, 1959

**FORM NO. 155**

(See Rule 329)

**Members' Voluntary Winding Up**

**Name of the Company :** SAMIR ENGINEERING COMPANY PRIVATE LIMITED

**Regd. Office :** No. 48, Chitrakoot Appartments, 18th Cross, Malleshwaram, Bengaluru-560055.

**NOTICE CONVENING FINAL MEETING**

**NOTICE** is hereby given in pursuance of Section 497 of the Companies Act, 1956, that a General Meeting of the members of the above-named Company will be held at its Registered Office at No. 48, chitrakoot Appartments, 18th Cross, Malleshwaram, Bengaluru-560055 on Monday, 18th July, 2016 at 11.00 A.M. for the purpose of having an account laid before them showing the manner in which the winding up has been conducted and the property of the Company disposed of and of hearing any explanation that may be given by the liquidator and also of determining by a Special Resolution of the Company, the manner in which the books, accounts and documents of the Company and of the Liquidator shall be disposed of.

Dated this 01st April, 2016.

**PD. 62**

For. SAMIR ENGINEERING COMPANY PRIVATE LIMITED,
**G.M. GANAPATHI,**
Liquidator.

## HIGH COURT OF KARNATAKA BENGALURU

### NOTIFICATION

### No. CA II-128/2012, DATED 29-02-2016

**READ :** This office Notification No. L.C.A II-128/2012 dated 25-10-2014 regarding identification of number of posts to the extent of 75% in Group 'A' posts, 80% in Group 'C' posts in the Unit of Hyderabad Karnataka Region and 8% posts in the State Level Offices i.e. City Civil Court, Bengaluru and Court of Small Causes Bengaluru, which are serving the State Capital Region, for the posts of Chief Administrative Officers, Software Technicians and Judgment Writers as per the Karnataka Public Employment (Reservation in appointment for Hyderabad-Karnataka Region) Order, 2013-reg.

**CORRIGENDUM**

In Notification No. **LCA II- 128/2012** dated 25-10-2014 with regard to identification of posts for State Level Office at page No. 2 in Table No.1 & 2 it shall be read as hereunder:

**IDENTIFICATION OF POSTS**

**TABLE – I**

Group- "A" (Junior Scale)

(Chief Administrative Officer) &

(Software Technician)

| Sl. No. | Name of the Post | Total Sanctioned Strength of Hyderabad Karnataka Region | Number of Posts identified & Reserved for Local Persons in the region out of the total sanctioned strength (75% of the posts as mentioned at Column No. 3 | Total Sanctioned Strength for State Level Office | Number of Posts identified & Reserved for Local Persons in the State Level Office out of the total sanctioned strength (8% of the posts as mentioned at Column No. 5 |
|---|---|---|---|---|---|
| **1** | **2** | **3** | **4** | **5** | **6** |
| 1 | Chief Administrative Officer | 6 | 5 | 12 | 1 |
| 2 | Software Technician | 6 | 5 | 1 | 1 |

**TABLE – II**

Group- "C"

(Judgment Writer)

| Sl. No. | Name of the Post | Total Sanctioned Strength of Hyderabad Karnataka Region | Number of Posts identified & Reserved for Local Persons in the region out of the total sanctioned strength (80% of the posts as mentioned at Column No. 3 | Total Sanctioned Strength for State Level Office | Number of Posts identified & Reserved for Local Persons in the State Level Office out of the total sanctioned strength (8% of the posts as mentioned at Column No. 5 |
|---|---|---|---|---|---|
| 1 | 2 | 3 | 4 | 5 | 6 |
| 1 | Judgment Writer | 24 | 20 | 91 | 8 |

**PR. 340**

BY ORDER OF HON'BLE THE CHIEF JUSTICE,
**John Michael Cunha**
Registrar General
High Court of Karnataka, Bengaluru.

## OFFICE OF THE CITY CIVIL COURT, BENGALURU

**NOTIFICATION**

**No. ADM-I (E) 819/2016, DATED 24-03-2016**

Smt. K.P. Saroja, Asst. Registrar, City Civil Court, Bengaluru is granted 10 days of earned leave for the period from 17-02-2016 to 26-02-2016, on personal ground.

Sri T. Neelendra Naik, Asst. Registrar, City Civil Court, Bengaluru is placed in additional charge of Smt. K.P. Saroja, Asst. Registrar, City Civil Court, Bengaluru, during the above leave period.

Smt. K.P. Saroja, Asst. Registrar, City Civil Court, Bengaluru would have continued in the same post, but for proceedings on leave.

**PR. 341**

BY ORDER OF THE PRL-CITY CIVIL & SESSIONS JUDGE, BENGALURU
**Registrar**
City Civil Court, Bengaluru.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ

**ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ: 01/2014-15, ದಿನಾಂಕ: 03-04-2014**

**ಸಂಖ್ಯೆ: ಎ1. ಅಅಪ್ರ 71ಎ.01/2014-15, ದಿನಾಂಕ: 04-04-2016**

**ಉಪಸ್ಥಿತರು** : ಶ್ರೀ ಎಂ. ಪುಟ್ಟಣ್ಣ
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು

**ಪಿರ್ಯಾದಿ** : ಶ್ರೀ ಸಿ. ಮುನಿರಾಜು,
ಅರಣ್ಯ ರಕ್ಷಕ, ಅರಣ್ಯ ಸಂಚಾರಿ ದಳ,
ಬೆಂಗಳೂರು

**ಆರೋಪಿಗಳು** : 1. ಪಿ. ನಸರುಲ್ಲಾ ಖಾನ್ ಬಿನ್ ಖಾದರ್ ಸಾಬ್,
ವೀರಬಲಿ ರಸ್ತೆ, ಮಸಪೇಟ, ರಾಯಚೋಟಿ
ವೈಎಸ್‌ಆರ್, ಕಡಪ ಜಿಲ್ಲೆ, ಆಂಧ್ರಪ್ರದೇಶ (ಲಾರಿ ಚಾಲಕ)
(ನ್ಯಾಯಾಲಯದಿಂದ ಜಾಮೀನು ಪಡೆದಿರುತ್ತಾರೆ)

| | | |
|---|---|---|
| **ಅರ್ಜಿದಾರರು** | : | ಪಳಗಿರಿ ಹಸನಯ್ಯ ಬಿನ್ ನಬಿಸಾಬ್,<br>ನಂ. 8/48, ಟ್ಯಾಂಕ್ ಸ್ಟ್ರೀಟ್, ಮಸಪೇಟ, ರಾಯಚೋಟಿ,<br>ವೈಎಸ್ಆರ್, ಕಡಪ ಜಿಲ್ಲೆ, ಆಂಧ್ರಪ್ರದೇಶ,<br>(ವಾಹನದ ಮಾಲೀಕರು – ಬಂದಿಸಿರುವುದಿಲ್ಲ) |

**ಪ್ರಕರಣದ ಸಾರಾಂಶ :**

ದಿನಾಂಕ: 03–04–2014ರಂದು ಬೆಂಗಳೂರು ಅರಣ್ಯ ಸಂಚಾರಿ ದಳದ ಅರಣ್ಯ ರಕ್ಷಕರು ಹಳೇ ಮದ್ರಾಸ್ ರಸ್ತೆ, ಅರಣ್ಯ ತನಿಖಾ ಠಾಣೆಯಲ್ಲಿ ತಪಾಸಣೆ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮಧ್ಯಾಹ್ನ ಸುಮಾರು 3.30ರ ಸಮಯದಲ್ಲಿ ಹೊಸಕೋಟೆ ಕಡೆಯಿಂದ ಬೆಂಗಳೂರು ಕಡೆಗೆ ಅನುಮಾನಸ್ಪದವಾಗಿ ಬರುತ್ತಿದ್ದ ಲಾರಿಯನ್ನು ತಪಾಸಣೆಗೆ ನಿಲ್ಲಿಸಲು ಸೂಚಿಸಲಾಗಿ, ಸದರಿ ಲಾರಿಯ ಚಾಲಕನು ವಾಹನವನ್ನು ನಿಲ್ಲಿಸದೇ ವೇಗವಾಗಿ ತನಿಖಾ ಠಾಣೆಯಿಂದ ಹೊರಟಿರುತ್ತಾನೆ. ಆದಕಾರಣ ದ್ವಿಚಕ್ರ ವಾಹನದಿಂದ ಲಾರಿಯನ್ನು ಹಿಂಬಾಲಿಸಲಾಗಿ, ಸಮವಸ್ತ್ರದಲ್ಲಿದ್ದ ಅರಣ್ಯ ಸಿಬ್ಬಂದಿಯನ್ನು ಕಂಡು ಲಾರಿಯ ಚಾಲಕನು ಹಳೇ ಮದ್ರಾಸ್ ರಸ್ತೆ ಅರಣ್ಯ ತನಿಖಾ ಠಾಣೆಯಿಂದ ಸುಮಾರು ಅರ್ಧ ಕಿಲೋ ಮೀಟರ್ ದೂರದಲ್ಲಿರುವ ಟೋಲ್ ಸಂಗ್ರಹಣಾ ಕೇಂದ್ರದ ಹತ್ತಿರ ಲಾರಿಯನ್ನು ನಿಲ್ಲಿಸಿ ಓಡಿ ಹೋಗಿರುತ್ತಾನೆ. ಆತನನ್ನು ಹಿಡಿಯಲು ಪ್ರಯತ್ನಿಸಲಾಗಿ ಆಸಾಮಿಯು ತಪ್ಪಿಸಿಕೊಂಡು ಪರಾರಿಯಾಗಿರುತ್ತಾನೆ. ತದನಂತರ ಲಾರಿಯ ಬಳಿ ದಾವಿಸಿ ಲಾರಿಯನ್ನು ಅಜಮಾಯಿಸಿ ನೋಡಲಾಗಿ, ಲಾರಿಯ ನೊಂದಣಿ ಸಂಖ್ಯೆ: ಎಪಿ–04–ವೈ–8577 ಆಗಿದ್ದು, ಲಾರಿ ಬಾಡಿಯಲ್ಲಿ ಸಿಮೆಂಟ್ ಮೂಟೆಗಳನ್ನು ಹಾಗೂ ಲಾರಿ ಬಾಡಿಯ ಹಿಂಭಾಗದಲ್ಲಿ ಮರದ ತುಂಡುಗಳನ್ನು ತುಂಬಿರುವುದು ಕಂಡುಬಂದಿರುತ್ತದೆ. ಇದನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ಅವುಗಳ ಗುಣಮಟ್ಟ ಹಾಗೂ ನೈಜತೆಯಿಂದಾಗಿ ಸದರಿ ಮರದ ತುಂಡುಗಳು ರಕ್ತಚಂದನ ಮರದ ತುಂಡುಗಳೆಂದು ಖಾತರಿಪಡಿಸಿಕೊಳ್ಳಲಾಗಿರುತ್ತದೆ. ಈ ಬಗ್ಗೆ ಹೆಚ್ಚಿನ ತನಿಖೆ ಕೈಗೊಳ್ಳುವ ಸಲುವಾಗಿ ಪಂಚರ ಸಮಕ್ಷಮ ಲಾರಿಯನ್ನು ಅಜಮಾಯಿಸಿ ನೋಡಲಾಗಿ, ಲಾರಿಯು ಅಶೋಕ ಲೇಲ್ಯಾಂಡ್ ಕಂಪನಿಯದಾಗಿದ್ದು, ಇಂಜಿನ್ ಸಂಖ್ಯೆ: SBP117611, ಚಾಸ್ಸಿ ಸಂಖ್ಯೆ: MB1KADYC1BPSC0371 ಎಂದು ಹಾಗೂ ಲಾರಿಯ ನೋಂದಣಿ ಸಂಖ್ಯೆ: ಎಪಿ–04–ವೈ–8577 ಎಂದು ನಮೂದಿಸಲಾಗಿರುತ್ತದೆ. ಲಾರಿಯ ಹಿಂಭಾಗದಲ್ಲಿ ತಾಡಪಾಲಿನಿಂದ ಮುಚ್ಚಲ್ಪಟ್ಟಿರುವ ಸಿಮೆಂಟ್ ತುಂಬಿರುವ ಮೂಟೆಗಳಿರುತ್ತದೆ. ಒಂದು ಮೂಟೆ 50 ಕೆ.ಜಿ. ತೂಕವಿದ್ದು, ಅಂದಾಜು 500 ಮೂಟೆಗಳಿರುತ್ತದೆ.

ಲಾರಿ ಬಾಡಿಯ ಹಿಂಭಾಗದಲ್ಲಿ ಮರದ ತುಂಡುಗಳಿದ್ದು, ಅವುಗಳು ರಕ್ತಚಂದನ ಮರದ ತುಂಡುಗಳೆಂದು ಖಾತರಿಪಡಿಸಿಕೊಂಡು ಎಣಿಕೆ ಮಾಡಿ ನೋಡಲಾಗಿ, ಒಟ್ಟು 12 (ಹನ್ನೆರಡು) ತುಂಡುಗಳಿದ್ದು, ತೂಕದ ಯಂತ್ರವನ್ನು ತರಿಸಿ ಸದರಿ ರಕ್ತ ಚಂದನ ಮರದ ತುಂಡುಗಳನ್ನು ತೂಕ ಮಾಡಲಾಗಿ, ಒಟ್ಟು 72 (ಎಪ್ಪತ್ತೆರಡು) ಕೆ.ಜಿ. ಇರುವುದು ಕಂಡುಬಂದಿರುತ್ತದೆ. ರಕ್ತಚಂದನ ಮರದ ತುಂಡುಗಳನ್ನು ಪರಿಶೀಲಿಸಲಾಗಿ, ಅವುಗಳು ಈ ಹಿಂದೆ ಉಪಯೋಗ ಮಾಡಿರುವ ಹಳೆಯ ತುಂಡುಗಳಾಗಿರುವುದು ಕಂಡುಬಂದಿದ್ದು, ತುಂಡುಗಳ ಮೇಲಿನ ತೊಗಟೆಗಳಿಗೆ ಹುಳು ಬಿದ್ದು ಅಲ್ಲಲ್ಲಿ ತೂತುಗಳಾಗಿರುತ್ತದೆ. ಸದರಿ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾ ಗುರುತು ಲಗತ್ತಾಗಿರುವುದಿಲ್ಲ. ರಕ್ತಚಂದನ ಮರದ ತುಂಡುಗಳ ತುದಿಗಳನ್ನು ಗರಗಸದಿಂದ ಕೊಯ್ದು ಮಾಡಿರುವುದು ಕಂಡುಬಂದಿರುತ್ತದೆ. ಲಾರಿಯ ಒಳಭಾಗದಲ್ಲಿ ಪರಿಶೀಲಿಸಲಾಗಿ, ಕೆಲವು ಬಿಲ್ಲುಗಳು ದೊರೆತಿದ್ದು, ಪರಿಶೀಲಿಸಿದಾಗ ಮೆ॥ ಪರಾಶಕ್ತಿ ಸಿಮೆಂಟ್ ಇಂಡಸ್ಟ್ರೀಸ್ ಲಿಮಿಟೆಡ್, ಪ್ಲಾಟ್ ನಂ.8–3–214/21, ಶ್ರೀನಿವಾಸುಪುರ ಕಾಲೋನಿ (ವೆಸ್ಟ್), ಹೈದರಾಬಾದ್–500038 ಎಂದು ನಮೂದಿಸಿದ್ದು, ಈ ವಿಳಾಸದಿಂದ ಮೆ॥ ಎನ್.ಡಿ.ಆರ್. ಎಸ್ಟೇಟ್, ಸರ್ವೆ ನಂ. 118/1, 118/2, ಎಂ.ವಿ.ಜೆ ಇಂಜಿನಿಯರಿಂಗ್ ಕಾಲೇಜ್, ಚೆನ್ನಸಂದ್ರ, ಬೆಂಗಳೂರು ಇಲ್ಲಿಗೆ ಸಾಗಾಣಿಕೆ ಮಾಡಲು ಬಿಲ್ಲಿನಲ್ಲಿ ನಮೂದಿಸಲಾಗಿರುತ್ತದೆ. ಇದಕ್ಕೆ ಸಂಬಂಧಪಟ್ಟ ಆಂಧ್ರಪ್ರದೇಶ ಸರ್ಕಾರದ ಸಿ.ಟಿ. ಡಿಪಾರ್ಟ್‌ಮೆಂಟ್ ವೇ ಬಿಲ್ ನಂ.271404012220115, ದಿನಾಂಕ: 01–04–2014, ಇ–ಸುಗಮ್ ನಂ.12632699067, ದಿನಾಂಕ: 01–04–2014, ಶ್ರೀ ಶಿವತೇಜ ಟ್ರಾನ್ಸ್‌ಪೋರ್ಟ್ ಕಂಪನಿಯ ಆದೇಶದ ಪ್ರತಿ ಇರುತ್ತವೆ ಹಾಗೂ ಆಂಧ್ರಪ್ರದೇಶ ಸರ್ಕಾರದ ಸಾರಿಗೆ ಇಲಾಖೆಯ ಆಥರೈಜೇಷನ್ ಸರ್ಟಿಫಿಕೇಟ್ (ಫಾರಂ 47) ಪ್ರತಿಗಳು ಹಾಗೂ ಮೋಟರ್ ವಾಹನ ಇನ್ಸೂರೆನ್ಸ್ ಪಾಲಿಸಿ ಸರ್ಟಿಫಿಕೇಟ್ ಪ್ರತಿಗಳು, ಸರ್ಟಿಫಿಕೇಟ್ ಆಫ್ ರಿಜಿಸ್ಟ್ರೇಷನ್ (ಫಾರಂ 23) ಪ್ರತಿ, ರಾಜೀವ್ ಸಿಟಿಜನ್ ಸರ್ವೀಸ್ ಸರ್ಟಿಫಿಕೇಟ್ ಹಾಗೂ ಆರ್.ಟಿ.ಓ. ಫಿಟ್‌ನೆಸ್ ಸರ್ಟಿಫಿಕೇಟ್ ಇರುತ್ತವೆ. ಈ ವಾಹನದ ಮಾಲೀಕನ ಹೆಸರು ಪಳಗಿರಿ ಹಸನಯ್ಯ, ತಂದೆ ಹೆಸರು ನಬಿಸಾಬ್, ವಿಳಾಸ: ನಂ.8/4ಬಿ, ಟ್ಯಾಂಕ್ ಸ್ಟ್ರೀಟ್, ಮಾಸಪೇಟ, ರಾಯಚೋಟಿ, ಕಡಪ ಜಿಲ್ಲೆ, ಆಂಧ್ರಪ್ರದೇಶ ಪಿನ್ ನಂ.516269 ಎಂದು ವಾಹನ ನೊಂದಣಿ ಸರ್ಟಿಫಿಕೇಟ್‌ನಲ್ಲಿ ನಮೂದಿಸಲಾಗಿರುತ್ತದೆ. ಸದರಿ ಲಾರಿ ಬಾಡಿಯ ಹಿಂಭಾಗದಲ್ಲಿ ಶೇಖರಿಸಿಟ್ಟಿದ್ದ 72 ಕೆ.ಜಿ ತೂಕವುಳ್ಳ ಒಟ್ಟು 12 ರಕ್ತಚಂದನ ಮರದ ತುಂಡುಗಳನ್ನು ಸಾಗಾಣಿಕೆ ಮಾಡಲು ಯಾವುದೇ ವಿಧವಾದ ದಾಖಲಾತಿ ಅಥವಾ ರಹದಾರಿಯು ಲಾರಿಯಲ್ಲಿ ಲಭ್ಯವಿರುವುದಿಲ್ಲ. ಈ ಸಂಬಂಧ ಲಾರಿ ಬಾಡಿಯ ಹಿಂಭಾಗದಲ್ಲಿದ್ದ ಒಟ್ಟು 12 ರಕ್ತ ಚಂದನ ಮರದ ತುಂಡುಗಳಿಗೆ 01 ರಿಂದ 12ರ ವರೆಗೆ ಹಳದಿ ಬಣ್ಣದಿಂದ ಕ್ರಮ ಸಂಖ್ಯೆಯನ್ನು ನಮೂದು ಮಾಡಿ ಸದರಿ ತುಂಡುಗಳ ಮೇಲೆ ಕೆ.ಎನ್.ಎಫ್.ಡಿ ಎಫ್.ಓ.ಸಿ ಸಂಖ್ಯೆ: 01/2014–15, ದಿನಾಂಕ: 03–04–2014 ಎಂದು ನಮೂದಿಸಲಾಗಿರುತ್ತದೆ ಹಾಗೂ ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 2(7)(ಎ), 62, 71ಎ, 79, 80 ಮತ್ತು ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 144ರ ಉಲ್ಲಂಘನೆಯಾಗಿರುವುದರಿಂದ ಈ ಕೃತ್ಯಕ್ಕೆ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ: 01/2014–15 ದಾಖಲು ಮಾಡಿ ಸರ್ಕಾರದ ಪರ ಅಮಾನತ್ತುಪಡಿಸಿಕೊಳ್ಳಲಾದ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ವಾಹನವನ್ನು ಹಾಗೂ ಮಾಲನ್ನು ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಅರಣ್ಯ ಭವನದ ದಾಸ್ತಾನು ಮಳಿಗೆಯಲ್ಲಿ ಸುರಕ್ಷಿತವಾಗಿ ದಾಸ್ತಾನು ಮಾಡಲಾಗಿದೆ ಹಾಗೂ ವಾಹನವನ್ನು ಬೆಂಗಳೂರು ಅರಣ್ಯ ಸಂಚಾರಿ ದಳದ ಆವರಣದಲ್ಲಿ ಸುರಕ್ಷಿತವಾಗಿ ನಿಲ್ಲಿಸಲಾಗಿರುತ್ತದೆ.

ಮಾನ್ಯ ಜೆ.ಎಂ.ಎಫ್.ಸಿ ಹೊಸಕೋಟೆ ನ್ಯಾಯಾಲಯದ ಬಿಡುಗಡೆ ಆದೇಶ ದಿನಾಂಕ: 05–06–2014ರಲ್ಲಿ ಪ್ರಕರಣದಲ್ಲಿ ಅರಣ್ಯೋತ್ಪನ್ನದೊಂದಿಗೆ ವಶಪಡಿಸಿಕೊಳ್ಳಲಾಗಿದ್ದ 440 ಸಿಮೆಂಟ್ ಮೂಟೆಗಳನ್ನು ಅರ್ಜಿದಾರರಾದ ಶ್ರೀ ಚಲುಮನ್ನ ಬಿನ್ ನಾರಾಯಣಪ್ಪ, ನಂ. 36, 1ನೇ ಕ್ರಾಸ್, 1ನೇ ಮುಖ್ಯರಸ್ತೆ (ನೀರಿನ ಟ್ಯಾಂಕ್ ಹತ್ತಿರ), ಮೇಡಹಳ್ಳಿ, ಬೆಂಗಳೂರು–560049 ಇವರಿಗೆ ಬಿಡುಗಡೆಗೊಳಿಸುವಂತೆ ಆದೇಶಿಸಿದ ಮೇರೆಗೆ ದಿನಾಂಕ: 10–06–2014ರಂದು ಅರ್ಜಿದಾರರಿಗೆ ಒಟ್ಟು 440 ಸಿಮೆಂಟ್ ಮೂಟೆಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ.

ಪ್ರಕರಣದ ತನಿಖೆ ನಡೆಸಿದ ವಲಯ ಅರಣ್ಯಾಧಿಕಾರಿಗಳು ಅಮಾನತ್ತುಪಡಿಸಿಕೊಂಡಿರುವ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ವಾಹನವನ್ನು ಹಾಗೂ 72 ಕೆ.ಜಿ ತೂಕವುಳ್ಳ ಒಟ್ಟು 12 ರಕ್ತಚಂದನ ಮರದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ಕೋರಿರುತ್ತಾರೆ.

ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ವಾಹನದ ಮಾಲೀಕರಾದ ಪಳಗಿರಿ ಹಸನಯ್ಯ ಬಿನ್ ನಾಬೀಸಾಬ್, ನಂ.8/48, ಟ್ಯಾಂಕ್ ಸ್ಟ್ರೀಟ್, ಮಸಪೇಟ, ರಾಯಚೋಟಿ, ರಾಯಚೋಟಿ (ಮಂಡಲ್), ರಾಯಚೋಟಿ, ಆಂದ್ರಪ್ರದೇಶ ರಾಜ್ಯ ಇವರು ವಕೀಲರ ಮುಖಾಂತರ ದಿನಾಂಕ: 30–04–2014ರಂದು ದಂಡ ಪ್ರಕ್ರಿಯೆಯ ಸಂಹಿತೆ ಕಲಂ 451 ಮತ್ತು 457ರಡಿ ಅರ್ಜಿ ಸಲ್ಲಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:01/2014–15ರಲ್ಲಿ ಅಮಾನತ್ತುಪಡಿಸಿರುವ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ಅನ್ನು ಮಾಲೀಕರ ವಶಕ್ಕೆ ಮಧ್ಯಂತರ ಬಿಡುಗಡೆಗೊಳಿಸುವಂತೆ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಅರ್ಜಿದಾರರ ಅರ್ಜಿಗೆ ಸರ್ಕಾರಿ ಪರ ಸಹಾಯಕ ಅಭಿಯೋಗ ನಿರ್ದೇಶಕರು ದಿನಾಂಕ: 06–05–2014 ರಂದು ಪಿರ್ಯಾದಿ ಪರ ಆಕ್ಷೇಪಣಾ ಅರ್ಜಿ ಸಲ್ಲಿಸಿ ಅರ್ಜಿದಾರರಿಗೆ ಸೇರಿದ್ದು ಎಂದು ಹೇಳಲಾದ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577ರಲ್ಲಿ ಸಿಮೆಂಟ್ ಮೂಟೆಗಳ ಜೊತೆಯಲ್ಲಿ 72 ಕೆ.ಜಿ ತೂಕ ಉಳ್ಳ 12 ರಕ್ತಚಂದನ ಮರದ ತುಂಡುಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದ ಅಪರಾಧದ ಅಡಿಯಲ್ಲಿ ಅಮಾನತ್ತುಪಡಿಸಿದ್ದು, ಈ ಪ್ರಕರಣದಲ್ಲಿ ತನಿಖೆಯು ಪೂರ್ಣಗೊಂಡಿರುವುದಿಲ್ಲ. ಆರೋಪಿತರ ವಿರುದ್ಧದ ಆಪಾದನೆಯ ಅಡಿ ಇನ್ನೂ ಮಹತ್ವಪೂರ್ಣ ಸಾಕ್ಷ್ಯಾ ಸಂಗ್ರಹಿಸಬೇಕಾಗಿರುತ್ತದೆ. ಆರೋಪಿಗಳನ್ನು ಪತ್ತೆಮಾಡಬೇಕಾಗಿದೆ. ಪ್ರಕರಣದ ವಿಚಾರಣೆಯು ವಿಳಂಬವಾಗುವ ಸಾಧ್ಯತೆ ಇರುತ್ತದೆ. ಸದರಿ ವಾಹನದಲ್ಲಿ ಸಾಗಿಸುತ್ತಿದ್ದ ಸಿಮೆಂಟ್ ಮೂಟೆಗಳು ಅರಣ್ಯ ಕಾಯ್ದೆಯ, ಅರಣ್ಯ ಉತ್ಪನ್ನದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಆದ್ದರಿಂದ ಸದರಿ ಸಿಮೆಂಟ್ ಮೂಟೆಗಳ ಬಗ್ಗೆ ದಾಖಲಾತಿಗಳನ್ನು ಪರಿಶೀಲಿಸಿ ಸಿಮೆಂಟ್ ಮೂಟೆಗಳನ್ನು ಮಾತ್ರ ಅರ್ಜಿದಾರರು/ಮಾಲೀಕರ ವಶಕ್ಕೆ ಬಿಡುಗಡೆಗೊಳಿಸಬಹುದು. ವಾಹನಕ್ಕೆ ಸಂಬಂಧಪಟ್ಟಂತೆ ಆರ್.ಟಿ.ಓ ಕಛೇರಿಯಿಂದ ಬಿ.ಎಕ್ಸ್‌ಟ್ರಾಕ್ಟ್ ಹಾಗೂ ದಾಖಲಾತಿಗಳನ್ನು ಪಡೆದು ಮುಂದಿನ ಕ್ರಮ ಜರುಗಿಸಬಹುದಾಗಿರುತ್ತದೆಂದು ಆಕ್ಷೇಪಣೆ ಸಲ್ಲಿಸಿರುತ್ತಾರೆ.

ಅರ್ಜಿದಾರರಿಗೆ ಈ ಪ್ರಾಧಿಕಾರವು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71ಬಿ ರಡಿ ಮೇಲೆ ತಿಳಿಸಿದ ವಾಹನ ಹಾಗೂ ಮಾಲನ್ನು 'ಏತಕ್ಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು' ಎಂಬುದಾಗಿ ದಿನಾಂಕ: 20–06–2014, 10–07–2014 ಹಾಗೂ 06–05–2015ರಲ್ಲಿ ಜಾರಿ ಮಾಡಿದ್ದ ಕಾರಣ ಕೇಳುವ ನೋಟೀಸ್ ಲಕೋಟೆಗಳನ್ನು ಸ್ವೀಕರಿಸಲು ಶ್ರೀ ಪಳಗಿರಿ ಹಸನಯ್ಯ ಬಿನ್ ನಬೀಸಾಬ್ ಇವರು ನಿರಾಕರಿಸಿದ ಕಾರಣ ನೊಂದಾಯಿತ ಅಂಚೆ ಲಕೋಟೆಗಳು ಕ್ರಮವಾಗಿ ದಿನಾಂಕ: 07–07–2014, 19–07–2014 ಹಾಗೂ 18–05–2015ರಲ್ಲಿ ವಾಪಸ್ ಈ ಕಛೇರಿಗೆ ತಲುಪಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಕಛೇರಿಯಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಡಪ, ವೈ.ಎಸ್.ಆರ್ ಜಿಲ್ಲೆ, ಆಂಧ್ರಪ್ರದೇಶ ಇವರಿಗೆ ದಿನಾಂಕ: 16–04–2014, 17–05–2014 ಹಾಗೂ 19–09–2014ರಲ್ಲಿ ಪತ್ರಗಳನ್ನು ಬರೆದು ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ವಾಹನದ ಮಾಲೀಕತ್ವದ ವಿವರಗಳನ್ನು ನೀಡುವಂತೆ ಕೋರಲಾಗಿತ್ತು. ಈ ಮಧ್ಯ ದಿನಾಂಕ: 07–04–2014 ಹಾಗೂ 30–04–2014ರಂದು ಸಂಜೆವಾಣಿ ದಿನಪತ್ರಿಕೆಯಲ್ಲಿ ಪ್ರಕಟಣೆಯನ್ನು ಹೊರಡಿಸಿ ವಾಹನಕ್ಕೆ ಸಂಬಂಧಪಟ್ಟಂತೆ ಯಾರಾದರೂ ವಾರಸುದಾರರಿದ್ದಲ್ಲಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರ ಕಛೇರಿಯ ವೇಳೆಯಲ್ಲಿ ಪ್ರಕಟಣೆ ಹೊರಡಿಸಿದ ದಿನಾಂಕದಿಂದ 30 ದಿನದೊಳಗಾಗಿ ಹಾಜರಾಗುವಂತೆ ಸೂಚಿಸಲಾಗಿತ್ತು. ದಿನಾಂಕ: 25–02–2015ರಲ್ಲಿ ಮತ್ತೊಮ್ಮೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಡಪ, ವೈ.ಎಸ್.ಆರ್ ಜಿಲ್ಲೆ, ಆಂಧ್ರಪ್ರದೇಶ ಇವರಿಗೆ ಪತ್ರ ಬರೆದು ಮುದ್ದಾಂ ಸಿಬ್ಬಂದಿಯನ್ನು ಕಳುಹಿಸಲಾಗಿತ್ತು.

ಅದರಂತೆ ದಿನಾಂಕ: 26–02–2015ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಡಪ, ವೈ.ಎಸ್.ಆರ್ ಜಿಲ್ಲೆ, ಆಂಧ್ರಪ್ರದೇಶ ಇವರು ವಾಹನದ ಮಾಲೀಕತ್ವದ ವಿವರವನ್ನು ದೃಢೀಕರಿಸಿ ಒದಗಿಸಿದ್ದು, ಸದರಿ ವರದಿಯಲ್ಲಿ ವಾಹನದ ಮಾಲೀಕರು ಶ್ರೀ.ಪಳಗಿರಿ ಹಸನಯ್ಯ ಬಿನ್ ನಬಿಸಾಬ್, ನಂ.8/4ಬಿ, ಟ್ಯಾಂಕ್ ಸ್ಟ್ರೀಟ್, ಮಸಪೇಟ, ರಾಯಚೋಟಿ (ಮಂಡಲ್), ಆಂಧ್ರಪ್ರದೇಶ ರಾಜ್ಯ ಎಂದು ತಿಳಿದುಬಂದಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಕಛೇರಿಯಿಂದ ವಾಹನದ ಮಾಲೀಕರ ವಿಳಾಸಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ಪ್ರಕಾರ ದಿನಾಂಕ: 20–06–2014, 10–07–2014 ಹಾಗೂ 06–05–2015ಗಳಂದು ಜಾರಿ ಮಾಡಲಾಗಿದ್ದ ಕಾರಣ ಕೇಳಿ ನೊಟೀಸ್‌ಗಳಲ್ಲಿ ನಮೂದಿಸಿದ್ದ ವಾಹನ ಮಾಲೀಕರ ವಿಳಾಸ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಒದಗಿಸಿದ ವಾಹನದ ಮಾಲೀಕತ್ವದ ವಿವರದಲ್ಲಿನ ಮಾಲೀಕರ ವಿಳಾಸವು ತಾಳೆ ಹೊಂದಿದ್ದು, ಸದರಿ ನೋಟೀಸ್‌ಗಳನ್ನು ಅರ್ಜಿದಾರರು ಸ್ವೀಕರಿಸಲು ನಿರಾಕರಿಸಿರುವುದನ್ನು ಗಮನಿಸಿದಲ್ಲಿ, ಉದ್ದೇಶಪೂರ್ವಕವಾಗಿ ಸದರಿ ನೊಂದಾಯಿತ ಅಂಚೆ ಲಕೋಟೆಗಳನ್ನು ತಿರಸ್ಕರಿಸಿ ವಿಳಂಬ ಮಾಡುತ್ತಿರುವುದು ಖಾತರಿಯಾಗಿರುತ್ತದೆ.

ಮುಂದುವರೆದು, ದಿನಾಂಕ: 28–04–2015 ಹಾಗೂ 22–05–2015 ರಂದು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71ಎ ರಡಿ ನಡೆದ ನ್ಯಾಯಾಲಯದ ನಡವಳಿಯಲ್ಲಿ ಅರ್ಜಿದಾರರಾಗಲೀ, ಅವರ ಪರ ವಕೀಲರಾಗಲೀ ಪ್ರಾಧಿಕಾರದ ಮುಂದೆ ಹಾಜರಾಗಲು ವಿಫಲರಾಗಿರುತ್ತಾರೆ. ದಿನಾಂಕ: 09–07–2015 ರಂದು ನಡೆದ ನ್ಯಾಯಾಲಯದ ನಡವಳಿಯಲ್ಲಿ ಅರ್ಜಿದಾರರ ಪರ ವಕೀಲರಾದ ಶ್ರೀ ಎನ್.ಕೆ. ಮುನಿರಾಜ ಎಂಬುವವರು ಹಾಜರಿದ್ದು, ವಾಹನದ ಮಧ್ಯಂತರ ಬಿಡುಗಡೆಗೆ ಸಲ್ಲಿಸಿದ್ದ ಅರ್ಜಿಯನ್ನು ಮುಖ್ಯ ಅರ್ಜಿಯ ಜೊತೆ ತೀರ್ಮಾನಿಸಬಹುದೆಂದು ತೀರ್ಮಾನಿಸಲಾಗಿರುತ್ತದೆ. ದಿನಾಂಕ: 07–08–2015 ರಂದು ನಡೆದ ನ್ಯಾಯಾಲಯದ ನಡವಳಿಯಲ್ಲಿ ಅರ್ಜಿದಾರರು ಹಾಗೂ ಅವರ ಪರ ವಕೀಲರಾದ ಶ್ರೀ ಎನ್. ಸುರೇಶ್ ಕುಮಾರ್ ಎಂಬುವವರು ಹಾಜರಿದ್ದು, ಹೊಸದಾಗಿ ವಕಾಲತ್ತು ಸಲ್ಲಿಸಿರುತ್ತಾರೆ. ತದನಂತರ ದಿನಾಂಕ: 04–09–2015 ರಂದು ನಡೆದ ನ್ಯಾಯಾಲಯದ ನಡವಳಿಯಲ್ಲಿ ಅರ್ಜಿದಾರರು ಹಾಜರಾತಿ ಅವರ ಪರ ವಕೀಲರು ಗೈರು ಹಾಜರಾದ ಪ್ರಯುಕ್ತ ಕಾಲಾವಕಾಶ ಕೋರಿರುತ್ತಾರೆ. ಅದರಂತೆ ದಿನಾಂಕ: 07–10–2015 ಮತ್ತು 28–10–2015 ರಂದು ನಡೆದ ನ್ಯಾಯಾಲಯದ ನಡವಳಿಯಲ್ಲಿ ಅರ್ಜಿದಾರರು ಹಾಜರಿದ್ದು, ಅವರ ಪರ ವಕೀಲರು ಗೈರು ಹಾಜರಿದ್ದ ಕಾರಣ ಅಂತಿಮವಾಗಿ ಅರ್ಜಿದಾರರಿಗೆ ಕಾಲಾವಾಕಾಶ ನೀಡಲಾಗಿರುತ್ತದೆ. ಆದರೆ, ದಿನಾಂಕ: 26–11–2015 ರಂದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರೀತ್ಯಾ ನಡೆಸಲಾದ ನ್ಯಾಯಾಲಯದ ನಡವಳಿಗಳಲ್ಲಿ ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರಾಗಲು ವಿಫಲರಾಗಿರುವುದರಿಂದ ವಿಚಾರಣೆಯಲ್ಲಿ ವಾಹನದ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಯಿತು.

ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ ಎನ್.ಬಿ. ಹೇಮಣ್ಣ ಬಿನ್ ಲೇಟ್, ಎನ್.ಬಸಣ್ಣ, ವಲಯ ಅರಣ್ಯಾಧಿಕಾರಿ ಹಾಗೂ ಶ್ರೀ ಸಿ. ಮುನಿರಾಜು ಬಿನ್ ಚಿಕ್ಕಮುನಿಯಪ್ಪ, ಅರಣ್ಯ ರಕ್ಷಕ ಇವರುಗಳ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕ ರವರು ಅಧಿಕೃತ ಅಧಿಕಾರಿ ಹಾಗೂ ಉಪ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ನಡೆಸಿರುತ್ತಾರೆ.

ಸರ್ಕಾರಿ ಪರ ಹಾಜರಿದ್ದ ಎಲ್ಲಾ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ವಾಹನವು ಒಳಗೊಂಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹಾಗೂ ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರೀತ್ಯಾ ನಡೆಸಲಾದ ನ್ಯಾಯಾಲಯದ ನಡವಳಿಗಳಲ್ಲಿ ಸಕ್ರೀಯವಾಗಿ ಹಾಜರಾಗಲು ವಿಫಲರಾಗಿರುವುದಲ್ಲದೇ ಹೆಚ್ಚಿನ ಕಾಲಾವಕಾಶ ನೀಡಿದ್ದರೂ ಸಹ ಆಸಕ್ತಿ ತೋರದೇ ಇರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ಅಭಿಯೋಗ ನಿರ್ದೇಶಕರು ವಾದವನ್ನು ಮಂಡಿಸಿರುತ್ತಾರೆ.

ಪ್ರಕರಣದ ಬಗ್ಗೆ ಸರ್ಕಾರಿ ಅಭಿಯೋಗ ನಿರ್ದೇಶಕರು ಮಂಡಿಸಿದ ವಾದ ಮತ್ತು ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಿದ್ದು, ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

1. ಅಶೋಕ ಲೇಲ್ಯಾಂಡ್ ಕಂಪನಿಯ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ವಾಹನವು ಕರ್ನಾಟಕ ಅರಣ್ಯ ಕಾಯ್ದೆ 1963 ಮತ್ತು ನಿಯಮ 1969 ಗಳ ಉಲ್ಲಂಘನೆ ಮಾಡಿ ಅಕ್ರಮವಾಗಿ ರಕ್ತಚಂಧನದ ತುಂಡುಗಳನ್ನು ಸಾಗಣೆಯಲ್ಲಿ ಒಳಗೊಂಡಿರುವುದೇ?
2. ಸದರಿ ಪ್ರಕರಣದಲ್ಲಿ ಅಶೋಕ ಲೇಲ್ಯಾಂಡ್ ಕಂಪನಿಯ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?
3. ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

   ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.
4. ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.
5. ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.
6. ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

ದಿನಾಂಕ: 03–04–2014ರಂದು ಮಧ್ಯಾಹ್ನ ಅರಣ್ಯ ರಕ್ಷಕರು ಹಳೇ ಮದ್ರಾಸ್ ರಸ್ತೆ ಅರಣ್ಯ ತನಿಖಾ ಠಾಣೆಯಲ್ಲಿ ತಪಾಸಣೆ ಕರ್ತವ್ಯ ನಿರ್ವಹಿಸುತ್ತಿದ್ದಾಗ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577ರ ಲಾರಿಯ ಚಾಲಕನು ವಾಹನವನ್ನು ನಿಲ್ಲಿಸದೇ ವೇಗವಾಗಿ ತನಿಖಾ ಠಾಣೆಯಿಂದ ಹೊರಟು ಸಮವಸ್ತ್ರದಲ್ಲಿದ್ದ ಅರಣ್ಯ ಸಿಬ್ಬಂದಿಯನ್ನು ಕಂಡು ಲಾರಿಯ ಚಾಲಕನು ಲಾರಿಯನ್ನು ನಿಲ್ಲಿಸಿ ಓಡಿ ತಪ್ಪಿಸಿಕೊಂಡಿರುವುದು, ಲಾರಿ ನೊಂದಣಿ ಸಂಖ್ಯೆ:ಎಪಿ–04–ವೈ–8577 ರಲ್ಲಿ ಅಕ್ರಮವಾಗಿ 72 ಕೆ.ಜಿ. ತೂಕವುಳ್ಳ ಒಟ್ಟು 12 ರಕ್ತಚಂದನ ಮರದ ತುಂಡುಗಳು ಇರುವುದು ಕಂಡುಬಂದಿದ್ದು, ಅರಣ್ಯ ಕಾಯ್ದೆಯ ಪ್ರಕಾರ ಸದರಿ ಮಾಲನ್ನು ಸಾಗಣೆ ಮಾಡಲು ಇರಬೇಕಾದ ರಹದಾರಿ ಮತ್ತು ಸಂಬಂಧಪಟ್ಟ ದಾಖಲೆಗಳು ವಾಹನದಲ್ಲಿ ದೊರಕದೇ ಇರುವುದರಿಂದ ಅರಣ್ಯ ಮೊಕದ್ದಮೆಯು ದಾಖಲಾಗಿದ್ದು, ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ರಡಿ ಕಾರಣ ಕೇಳುವ ನೋಟೀಸನ್ನು ಹಾಗೂ ಸದರಿ ಕಾಯ್ದೆಯ ಸೆಕ್ಷನ್ 71ಎ ರೀತ್ಯಾ ನಡೆಸಲಾದ ನ್ಯಾಯಾಲಯದ ನಡವಳಿಗಳಲ್ಲಿ ಹಾಜರಾಗುವಂತೆ ವಾಹನದ ಮಾಲೀಕರಿಗೆ ನೊಂದಾಯಿತ ಅಂಚೆ ಮೂಲಕ ಜಾರಿ ಮಾಡಲಾದ ಸಮನ್ಸ್‌ಗಳನ್ನು ಸ್ವೀಕರಿಸಿದ್ದು, ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರಾಗಲು ವಿಫಲರಾಗಿರುತ್ತಾರೆ.

ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ವಾಹನವು ಅಕ್ರಮವಾಗಿ 72 ಕೆ.ಜಿ ತೂಕವುಳ್ಳ ಒಟ್ಟು 12 ರಕ್ತಚಂದನ ಮರದ ತುಂಡುಗಳನ್ನು ಸಾಗಣೆ ಮಾಡುತ್ತಿದ್ದದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಸದರಿ ವಾಹನವು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ನಿಯಮ 1969ರ ಉಲ್ಲಂಘನೆ ಮಾಡಿರುವುದು ಖಾತರಿಯಾಗಿರುತ್ತದೆ.

ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ರಾಜ್ಯ ಸರ್ಕಾರ ಸ್ವತ್ತಾದ ರಕ್ತಚಂದನ ಮರಕ್ಕೆ ಸಂಬಂಧಪಟ್ಟ ಅರಣ್ಯ ಮೊಕದ್ದಮೆಯಲ್ಲಿ ಒಳಗೊಂಡ ವಾಹನವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ವಾಹನವನ್ನು ಮತ್ತು ಸರ್ಕಾರದ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

ದಿನಾಂಕ: 03–04–2014 ರಂದು ಕೃತ್ಯದ ಜಪ್ತಿ ಪಂಚನಾಮೆ ಮತ್ತು ಪ್ರಥಮ ವರ್ತಮಾನ ವರದಿಯನ್ನು ಪರಿಶೀಲಿಸಿದಾಗ ಪಿರ್ಯಾದಿಯು ಪಂಚನಾಮೆಯಲ್ಲಿ ತೋರಿಸಿರುವ ರಕ್ತಚಂದನ ಮರದ ತುಂಡುಗಳನ್ನು ವಾಹನದ ಸಮೇತ ಜಪ್ತಿ ಮಾಡಿ ವಶಪಡಿಸಿಕೊಂಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 62(3)ರ ಅನುಗುಣವಾಗಿರುತ್ತದೆ. ಅಲ್ಲದೇ ಕೃತ್ಯ ನಡೆದ ದಿವಸವಾಗಲೀ ಅಥವಾ ಇದುವರೆವಿಗೂ ಆಗಲೀ, ಅರ್ಜಿದಾರರಾಗಲೀ ಅಥವಾ ಆರೋಪಿಯಾಗಲೀ ಮೇಲೆ ತಿಳಿಸಿದ ರಕ್ತಚಂದನ ಮರದ ತುಂಡುಗಳನ್ನು ಸಾಗಿಸಲು ಅರಣ್ಯ ಇಲಾಖೆಯ ರಹದಾರಿ ಇರುವ ಬಗ್ಗೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ಈ ಅಂಶಗಳನ್ನು ಪರಿಶೀಲಿಸಿದಾಗ ಅರ್ಜಿದಾರರು ಮತ್ತು ಆರೋಪಿ ಸೇರಿ ಸದರಿ ರಕ್ತಚಂದನ ಮರದ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಿಸುತ್ತಿದ್ದುದು ಸ್ಪಷ್ಟವಾಗುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿದಾಗ ದಿನಾಂಕ: 03–04–2014 ರಂದು ಮೇಲೆ ತಿಳಿಸಿದ ಲಾರಿಯಲ್ಲಿ 12 ರಕ್ತಚಂದನ ಮರದ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಿಸುತ್ತಿದ್ದದು ಖಾತರಿಯಾದ ಕಾರಣ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ಅನ್ನು ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಲು ಬರುವುದಿಲ್ಲವೆಂದು ತೀರ್ಮಾನಿಸಿ ಅರ್ಜಿದಾರರು ದಿನಾಂಕ: 30–04–2014 ರಂದು ದಂಡ ಪ್ರಕ್ರಿಯೆ ಸಂಹಿತೆ ಕಲಂ 451 ಮತ್ತು 457ರಲ್ಲಿ ಸಲ್ಲಿಸಿದ್ದ ಅರ್ಜಿಯನ್ನು ವಜಾಗೊಳಿಸುತ್ತಾ, ಈ ಕೆಳಕಂಡಂತೆ ಮುಟ್ಟುಗೋಲು ಆದೇಶ ಹೊರಡಿಸಿದೆ.

**ಆದೇಶ**

ನಾನು ಎಂ. ಪುಟ್ಟಣ್ಣ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ: 01/2014–15, ದಿನಾಂಕ: 03–04–2014 ರಲ್ಲಿ ಅಮಾನತ್ತುಪಡಿಸಿಕೊಂಡಿರುವ 72 ಕೆ.ಜಿ ತೂಕವುಳ್ಳ ಒಟ್ಟು 12 ರಕ್ತಚಂದನ ಮರದ ತುಂಡುಗಳನ್ನು ಹಾಗೂ ಅಶೋಕ

ಲೇಲ್ಯಾಂಡ್ ಕಂಪನಿಯ ಲಾರಿ ನೊಂದಣಿ ಸಂಖ್ಯೆ: ಎಪಿ–04–ವೈ–8577 ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿವಸ ದಿನಾಂಕ: 04–04–2016ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

PR-342
SC-10

ಎಂ. ಪುಟ್ಟಣ್ಣ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು–3

## ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ ಬೆಂಗಳೂರು, ಇವರ ನ್ಯಾಯಾಲಯದಲ್ಲಿ

**ದಾವಾ ಸಂಖ್ಯೆ: ಜೆಆರ್‌ಬಿ/ಎಂಡಿ/03/2015–16.**

| ವಾದಿ | ಪ್ರತಿವಾದಿಗಳು |
|---|---|
| ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ಲಿ., ನಂ.311, 'ಎ' ಬ್ಲಾಕ್, ಶ್ರೀ ದೇವರಾಜ ಅರಸು ಬಡಾವಣೆ, ಪಿ.ಬಿ.ರಸ್ತೆ, ದಾವಣಗೆರೆ–577 006, ಇದರ ಮುಖ್ಯಕಾರ್ಯನಿರ್ವಹಣಾಧಿಕಾರಿ. | 1. **ಕ್ಲೈಮೆಂಟ್ ಸ್ಟ್ಯಾನ್ಲೀ ಕುಮಾರ್ @ ಸಿ.ಎಸ್. ಕುಮಾರ್,** ಬಿನ್ ಕೆ.ಇಸ್ರೇಲ್, ವಯಸ್ಸು 50 ವರ್ಷ, (ಅಮಾನತ್ತಿನಲ್ಲಿರುವವರು) (ಮರಿಯಪ್ಪನವರ ಮನೆ) ದುರ್ಗಿಗುಡಿ, 3ನೇ ಕ್ರಾಸ್, ಬಸವೇಶ್ವರ ಹಿಟ್ಟಿನ ಗಿರಣಿ ಪಕ್ಕ, ಹೊನ್ನಾಳಿ, ದಾವಣಗೆರೆ ಜಿಲ್ಲೆ–577217.<br>2. **ಶ್ರೀ ಎಂ.ಹೆಚ್. ದಿನೇಶ್,** ಬಿನ್ ಲೇಟ್ ಎಂ.ಹನುಮಂತಪ್ಪ ವಯಸ್ಸು 49 ವರ್ಷ, ಕಿರಿಯ ಸಹಾಯಕರು, ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., **ನ್ಯಾಮತಿ ಶಾಖೆ,** ಹೊನ್ನಾಳಿ ತಾಲ್ಲೂಕು–577223.<br>3. **ಶ್ರೀಮತಿ ಕೆ.ಬಿ. ಭಾರತಿ,** ಬಿನ್ ಬಸವರಾಜಪ್ಪ ಕೆ. ವಯಸ್ಸು 40 ವರ್ಷ, ಕಿರಿಯ ಸಹಾಯಕರು, ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್, ನಿ., ಬಸವಾಪಟ್ಟಣ ಶಾಖೆ, ಬಸವಾಪಟ್ಟಣ–577551. |

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 103 (1) ರನ್ವಯ ಆದೇಶ ಪೂರ್ವ ಜಪ್ತಿ ನೋಟೀಸು**

ವಾದಿಯು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ದಾವೆಯನ್ನು ದಾಖಲಿಸಿ, ರೂ.3,95,000–00 ಗಳನ್ನು ಹಣ ದುರುಪಯೋಗ ಮಾಡಿದ ದಿನಾಂಕದಿಂದ ಸದರಿ ಮೊತ್ತ ವಸೂಲಾಗುವವರೆಗೆ ಪ್ರತಿವಾದಿಗಳಿಂದ ಶೇಕಡ 18ರ ಬಡ್ಡಿಯೊಂದಿಗೆ ವಸೂಲಿ ಮಾಡಿಕೊಳ್ಳಲು ದಾವಾದೇಶ ನೀಡಬೇಕೆಂದು ಕೋರಲಾಗಿದೆ. ದಾವಾ ಅರ್ಜಿಯೊಂದಿಗೆ ಕಲಂ 103 ರಡಿಯಲ್ಲಿ ಪ್ರಮಾಣ ಪತ್ರದೊಂದಿಗೆ ಅರ್ಜಿಯನ್ನು ಸಲ್ಲಿಸಿ, ಎರಡನೆಯ ಪ್ರತಿವಾದಿಯ ಸ್ಥಿರಾಸ್ತಿಯನ್ನು ಆದೇಶಕ್ಕೆ ಪೂರ್ವ ಜಪ್ತಿ ಮಾಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

2. ಕಲಂ 103 ರನ್ವಯ ಪ್ರಮಾಣೀಕರಿಸಿ ಸಲ್ಲಿಸಿದ ಅರ್ಜಿ ಮತ್ತು ಕಲಂ 70 ರನ್ವಯ ಸಲ್ಲಿಸಿರುವ ದಾವಾ ಅರ್ಜಿ ಇವುಗಳಲ್ಲಿ ವಿವರಿಸಿರುವ ಅಂಶಗಳೆಂದರೆ, ವಾದಿ ಸಹಕಾರ ಬ್ಯಾಂಕು ದಾವಣಗೆರೆ ಜಿಲ್ಲೆಯಾದ್ಯಂತ 14 ಶಾಖೆಗಳನ್ನು ಹೊಂದಿದ್ದು, ಇವುಗಳಲ್ಲಿ ಹೊನ್ನಾಳಿ ಶಾಖೆ ಕೂಡಾ ಒಂದಾಗಿದೆ. ಪ್ರತಿವಾದಿಗಳು ವಾದಿ ಸಹಕಾರ ಬ್ಯಾಂಕಿನ ನೌಕರರಾಗಿದ್ದಾರೆ. ಎರಡನೇ ಪ್ರತಿವಾದಿಯು ದಿನಾಂಕ 28–11–2006 ರಿಂದ 04–01–2011 ರವರೆಗೆ ಹೊನ್ನಾಳಿ ಶಾಖೆಯಲ್ಲಿ ಕಿರಿಯ ಸಹಾಯಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಮೇಲೆ ವಿವರಿಸಿದ ಶಾಖೆಯಲ್ಲಿ ನಡೆದಿರುವ ಹಣ ದುರುಪಯೋಗ, ಅವ್ಯವಹಾರಗಳಿಗೆ ಸಂಬಂಧಿಸಿದಂತೆ, ಕಲಂ 64ರ ಶಾಸನಬದ್ಧ ವಿಚಾರಣೆ ನಡೆಸಲು ಆದೇಶಿಸಲಾಗಿದ್ದು, ಇದರನ್ವಯ ಕಲಂ 64 ರ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಯವರು ದಿನಾಂಕ 16–08–2014 ರಂದು ವರದಿ ಸಲ್ಲಿಸಿರುತ್ತಾರೆ. ವರದಿಯನ್ನು ಪರಿಶೀಲಿಸಿ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಇವರು ದಿನಾಂಕ 27–12–2014 ರಂದು ಕಲಂ 68 ರನ್ವಯ ಆದೇಶ ಹೊರಡಿಸಿರುತ್ತಾರೆ. ಮೇಲೆ ವಿವರಿಸಿದ ಶಾಸನಬದ್ಧ ವರದಿ ಮತ್ತು ಕಲಂ 68 ರ ಶಾಸನಬದ್ಧ ಆದೇಶ ಇವುಗಳನ್ವಯ ಪ್ರತಿವಾದಿಗಳು ಬ್ಯಾಂಕಿನ ಹಣ ದುರುಪಯೋಗ ಮಾಡಿರುವುದು. ದುರುಪಯೋಗ ಪಡಿಸಿಕೊಂಡಿರುವುದು ಸಾಬೀತಾಗಿರುತ್ತದೆ. ದುರುಪಯೋಗಪಡಿಸಿಕೊಂಡ ಹಣದಿಂದ ಪ್ರತಿವಾದಿಗಳು ತಮ್ಮ ಮತ್ತು ಸಂಬಂಧಿಕರ ಹೆಸರುಗಳಲ್ಲಿ ಆಸ್ತಿ ಮಾಡುವ ಮೂಲಕ ಅವ್ಯವಹಾರ ಎಸಗಿರುತ್ತಾರೆ.

3. ಮೇಲಿನ ಹಿನ್ನೆಲೆಯಲ್ಲಿ ಕಲಂ 70 ರ ದಾವಾ ಅರ್ಜಿಯೊಂದಿಗೆ ಕಲಂ 103 ರನ್ವಯ ಪ್ರಮಾಣೀಕರಿಸಿದ ಅರ್ಜಿಯನ್ನು ಬ್ಯಾಂಕು ಸಲ್ಲಿಸಿ, ಈ ಷೆಡ್ಯೂಲಿನಲ್ಲಿ ವಿವರಿಸಿರುವ ಆಸ್ತಿಗೆ ಆದೇಶ ಪೂರ್ವ ಜಪ್ತಿ ಹೊರಡಿಸಬೇಕೆಂದು ಕೋರಲಾಗಿದೆ. ಷೆಡ್ಯೂಲಿನಲ್ಲಿ ವಿವರಿಸಿರುವ ಆಸ್ತಿಯನ್ನು ಮಾರಾಟ, ಪರಭಾರೆ ಮಾಡಲು ಎರಡನೆಯ ಪ್ರತಿವಾದಿಯು ಹುನ್ನಾರ ನಡೆಸುತ್ತಿದ್ದು, ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸದಿದ್ದಲ್ಲಿ, ಷೆಡ್ಯೂಲ್ ಆಸ್ತಿಯನ್ನು ಯಾವುದೇ ಸಂದರ್ಭದಲ್ಲಿ ವರ್ಗಾವಣೆ, ಭೋಗ್ಯ, ಪರಭಾರೆ ಮಾಡಬಹುದಾಗಿದೆ. ಒಂದು ವೇಳೆ ಷೆಡ್ಯೂಲ್ ಆಸ್ತಿಯನ್ನು ಆದೇಶ ಪೂರ್ವ ಜಪ್ತಿ ಮಾಡದೇ ಇದ್ದಲ್ಲಿ, ಈ ಪ್ರಕರಣದಲ್ಲಿ ನ್ಯಾಯಾಲಯವು ಹೊರಡಿಸಬಹುದಾದ ದಾವಾದೇಶವನ್ನು ಜಾರಿಗೊಳಿಸಿ ವಸೂಲು ಮಾಡಿಕೊಳ್ಳಲು ಬೇರ್‍ಯಾವುದೇ ರಹಾ ವಾದಿ ಬ್ಯಾಂಕಿಗೆ ಇರುವುದಿಲ್ಲ ಎಂದು ವಿವರಿಸಲಾಗಿದೆ. ಈ ಮೇಲಿನ ಅಂಶಗಳನ್ನು ನ್ಯಾಯಾಲಯವು ಕೂಲಂಕುಷವಾಗಿ ಪರಿಶೀಲಿಸಿ, ಮೇಲ್ನೋಟಕ್ಕೆ ಮೇಲಿನ ಅಂಶಗಳು ಸಮಂಜಸವೆನಿಸುತ್ತದೆ ಎಂದು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಗಿನಂತೆ ಷರತ್ತುಬದ್ಧ ಆದೇಶ ಪೂರ್ವ ಜಪ್ತಿ ನೋಟೀಸನ್ನು ನೀಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣದಿಂದಾಗಿ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ಮತ್ತು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಓ/139/ಸಿಎಲ್ಎಂ/2010 ದಿನಾಂಕ 17–02–2011 ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಈ ಪ್ರಕರಣದ ಪ್ರತಿವಾದಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಗಳನ್ನು ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 ರ ಅವಕಾಶದಂತೆ ಷರತ್ತುಬದ್ಧ ಆದೇಶಕ್ಕೆ ಪೂರ್ವ ಜಪ್ತಿ ನೋಟೀಸು ಹೊರಡಿಸಿರುತ್ತೇನೆ.

ಎರಡನೆಯ ಪ್ರತಿವಾದಿಯು ಈ ಷರತ್ತುಬದ್ಧ ಆದೇಶದಿಂದ ಮುಕ್ತವಾಗಿಸಲು ಇಚ್ಛಿಸಿದಲ್ಲಿ ಈ ಆದೇಶ ಹೊರಡಿಸಿದ 30 (ಮೂವತ್ತು) ದಿವಸದೊಳಗಾಗಿ ಕ್ಲೈಂ ಮೊತ್ತವನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ, ಅಧಿಕೃತ ರಸೀದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದಲ್ಲಿ ಈ ಷರತ್ತುಬದ್ಧ ಆದೇಶಕ್ಕೆ ಪೂರ್ವ ಜಪ್ತಿ ನೋಟೀಸಿನಿಂದ ಮುಕ್ತಗೊಳಿಸಲಾಗುವುದು.

1. **ಶ್ರೀ ಎಂ.ಹೆಚ್. ದಿನೇಶ್ ಇವರ ಸಂಬಂಧಿಕರಿಗೆ ಸಂಬಂಧಿಸಿದಂತೆ :–**

(1) **ಸ್ವತ್ತು :–** ಶಿಖಾರಿಪುರ ತಾಲ್ಲೂಕು ಹೊಸೂರು ಹೋಬಳಿಯ ಕೆಂಗಟ್ಟೆ ಗ್ರಾಮದ ಸರ್ವೇ ನಂ.21 ಹಿಸ್ಸಾ 1 ರಲ್ಲಿನ 7 ಎಕರೆ ಜಮೀನು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 29–03–2016 ರಂದು ಹೊರಡಿಸಿರುತ್ತೇನೆ.

**PR-343**
**SC-10**

**ಪಾಂಡುರಂಗ ಗರಗ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ವಿಜಯಪುರ

**ಜ್ಞಾಪನ**

**ಸಂ : ಇ1(ಎ)(ಇ2)(ಇ4)ಪ್ರೌಶಾಶಿ–ದೂರು–96–2008–09 ದಿನಾಂಕ: 09–02–2016**

**ವಿಷಯ :** ಶ್ರೀ ಬಿ.ಸಿ. ಲಮಾಣಿ ಚಿತ್ರಕಲಾ ಶಿಕ್ಷಕರು ಸರ್ಕಾರಿ ಪ್ರೌಢ ಶಾಲೆ ಗಬಸಾವಳಗಿ ಇವರು ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಕುರಿತು.

**ಉಲ್ಲೇಖ :**

1) ಈ ಕಾರ್ಯಾಲಯದ ಪತ್ರ ಸಂ.ಇ4–ಪ್ರೌಶಾಶಿ–ದೂರು–2008–09, ದಿನಾಂಕ: 27–06–2008
2) .ಈ ಕಾರ್ಯಾಲಯದ ಪತ್ರದ ಸಮ ಸಂ. ಇ1–(ಇ4) ಪ್ರೌಶಾಶಿ–ದೂರು–2008–09, ದಿನಾಂಕ: 27–06–2008
3) ಈ ಕಾರ್ಯಾಲಯದ ಪತ್ರ ಸಂ.ಇ4–ಪ್ರೌಶಾಶಿ–ದೂರು–2008–09, ದಿನಾಂಕ: 06–12–2008
4) ಈ ಕಾರ್ಯಾಲಯದ ಪತ್ರ ಸಂ.ಇ4–ಪ್ರೌಶಾಶಿ–ದೂರು–ಅಮಾನತ್ತು–2008–09, ದಿನಾಂಕ: 22–01–2009, ವಿಚಾರಣಾಧಿಕಾರಿಗಳು ಬಿರಾದಾರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ಹಾಗೂ ಮಂಡನಾಧಿಕಾರಿಗಳು ಶ್ರೀ ಆಲಗೂರ ಮುಗುಜಿಎಚ್ಎಸ್ ಗಬಸಾವಳಗಿ.
5) ಶ್ರೀ ಎಸ್.ಎಸ್. ಬಿರಾದಾರ ವಿಚಾರಣಾಧಿಕಾರಿಗಳು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಿಂದಗಿ ಇವರ ವಿಚಾರಣಾ ವರದಿ ದಿನಾಂಕ: 22–09–2009
6) ಈ ಕಾರ್ಯಾಲಯದ ಪತ್ರ ಸಂ.ಇ1–ಇ4–ಪ್ರೌಶಾಶಿ–ದೂರು–2008–09, ದಿನಾಂಕ: 16–02–2010
7) ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ರವರ ಪತ್ರ ಸಂ. ಇ6–ಎಲ್ ವಿ ಎಲ್–ಟಿ ಶಾ.ಆ.ಕಾಕೇನು–2009–2010, ದಿನಾಂಕ: 15–03–2010
8) ಈ ಕಾರ್ಯಾಲಯದ ಪತ್ರದ ಸಮ ಸಂ. ದಿನಾಂಕ: 18–07–2011
9) ಶ್ರೀಮತಿ ವಿ ಎಸ್ ಹಂದಿಗೋಳ ವಿಷಯ ಪರವೀಕ್ಷಕರು ಇವರ ವರದಿ ದಿನಾಂಕ: 03–05–2012 ಹಾಗೂ 14–01–2016

**ಪ್ರಸ್ತಾವನೆ :–**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಗಳನ್ವಯ, ಶ್ರೀ ಬಿ.ಸಿ. ಲಮಾಣಿ ಚಿತ್ರಕಲಾ ಶಿಕ್ಷಕರು ಸರಕಾರಿ ಪ್ರೌಢ ಶಾಲೆ ಗಬಸಾವಳಗಿ (ಲೀನ್ ಯಂಕಂಚಿ) ಇವರು ಶಾಲಾ ಕೆಲಸಕ್ಕೆ ದಿನಾಂಕ: 07–08–2006 ರಿಂದ ಈವರೆಗೂ ಗೈರು ಉಳಿದಿದ್ದು, ಈ ಕುರಿತು ಶಾಲೆಯ ಮುಖ್ಯೋಪಾಧ್ಯಾಯರು ಇವರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಸಾಕಷ್ಟು ಸಲ ತಿಳುವಳಿಕೆ ಪತ್ರಗಳನ್ನು ಕೊಟ್ಟಿದರೂ ಸದರ ಪತ್ರಗಳನ್ನು ಈ ಶಿಕ್ಷಕರು ಸ್ವೀಕರಿಸದೆ ನಿರಾಕರಿಸಿರುತ್ತಾರೆ. ಈ ಕುರಿತು ದಾಖಲೆಗಳು ಮರಳಿ ಬಂದಿರುತ್ತವೆ. ಕಾರಣ ಈ ಬಗ್ಗೆ ಇವರನ್ನು ಸರಕಾರಿ ಸೇವೆಯಿಂದ ಅಮಾನತ್ತುಗೊಳಿಸಿ, ಇಲಾಖಾ ವಿಚಾರಣೆ ಕೈಕೊಳ್ಳಲಾಗಿತ್ತು. ಅದರಂತೆ ಮೇಲಿನ ಉಲ್ಲೇಖ (3) ರ ಪ್ರಕಾರ ಈ ಶಿಕ್ಷಕರಿಗೆ ಆರೋಪಪಟ್ಟಿ ಜಾರಿ ಮಾಡಿ ಲಿಖಿತ ಹೇಳಿಕೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಶಿಕ್ಷಕರು ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ. ಕಾರಣ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಉಲ್ಲೇಖ (4) ರ ಪ್ರಕಾರ ವಿಚಾರಣಾಧಿಕಾರಿಗಳನ್ನಾಗಿ ಶ್ರೀ ಎಸ್.ಎಸ್. ಬಿರಾದಾರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ಇವರನ್ನು ಹಾಗೂ ಮಂಡನಾಧಿಕಾರಿಗಳನ್ನಾಗಿ ಶ್ರೀ ಆಲಗೂರ ಮುಖ್ಯೋಪಾಧ್ಯಾಯರು ಸರಕಾರಿ ಪ್ರೌಢ ಶಾಲೆ ಗಬಸಾವಳಗಿ ಇವರನ್ನು ನೇಮಕ ಮಾಡಿ ವರದಿ ಸಲ್ಲಿಸುವಂತೆ ತಿಳಿಸಲಾಗಿತ್ತು. ಉಲ್ಲೇಖ (5) ರ ಪ್ರಕಾರ ವಿಚಾರಣಾಧಿಕಾರಿಗಳು ಈ ಕುರಿತು ವರದಿ ಸಲ್ಲಿಸಿದ್ದು, ಈ ವರದಿಯಲ್ಲಿ ಈ ಶಿಕ್ಷಕರು ತಮ್ಮ ಸ್ವಗ್ರಾಮದಲ್ಲಿ ವಾಸವಿದ್ದು, ಇವರು ಕೌಟುಂಬಿಕ ಸಮಸ್ಯೆ ಕಾರಣ ಗೈರು ಉಳಿದಿದ್ದು, ಇವರು ಯಾವುದೇ ಇಲಾಖೆ ಪತ್ರಗಳನ್ನು ಸ್ವೀಕರಿಸುತ್ತಿಲ್ಲ. ಹಾಗೂ ಸ್ವ–ವಿಳಾಸಕ್ಕೆ ಹೋದರೂ ಮರೆಯಾಚಿಸಿ ಅಲೆದಾಡುತ್ತಿದ್ದಾರೆ ಕಾರಣ ಇವರು ಸೇವೆಯಲ್ಲಿ ಮುಂದುವರೆಯಲು ಆಸಕ್ತಿ ಹೊಂದಿರುವುದಿಲ್ಲ. ಆದರಿಂದ ಇವರನ್ನು ಸೇವೆಯಿಂದ ವಜಾಗೊಳಿಸಬೇಕೆಂದು ವರದಿಯಲ್ಲಿ ತಿಳಿಸಿರುತ್ತಾರೆ.

ಈ ಕುರಿತು ಅಂತಿಮ ನಿರ್ಧಾರ ತೆಗೆದುಕೊಳ್ಳುವ ಹಂತದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಪತ್ರ ಸಂ.ಟಿ6–ಎಲ್.ವಿ. ಎಲ್–ಟಿಶಾಅ–ಕಾಕೆನು:2009–2010 ದಿನಾಂಕ: 15–03–2010 ರ ಪತ್ರದ ಮೂಲಕ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ಇವರು ಈ ಶಿಕ್ಷಕರನ್ನು ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಬೇಕೆಂದು ವಿನಂತಿಸಿದ್ದಾರೆ.

ಅದರಂತೆ ಈ ಕಾರ್ಯಾಲಯದ ಪತ್ರ ಸಂ.ಇ2(ಇ4)ದೂರು–76–2008–09 ದಿನಾಂಕ: 18–07–2011ರ ಪತ್ರದ ಮೂಲಕ ಅನುಮತಿ ಕುರಿತು ಶಿಕ್ಷಕರ ಮನವಿ ಪತ್ರವನ್ನು ಲಗತ್ತಿಸಿರುವುದಿಲ್ಲ. ಲಗತ್ತಿಸಿ ಈ ಕಾರ್ಯಾಲಯಕ್ಕೆ ಸಲ್ಲಿಸುವಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ರವರಿಗೆ ತಿಳಿಸಲಾಗಿತ್ತು ಅದರಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ರವರು ಈ ಕುರಿತು ಮನವಿ ಸಲ್ಲಿಸದೆ ದಿನಾಂಕ: 04–08–2011ರ ಪತ್ರದ ಮೂಲಕ ದಿನಾಂಕ: 22–09–2009ರ ವಿಚಾರಣಾ ವರದಿ ಪ್ರಕಾರ ಈ ಶಿಕ್ಷಕರನ್ನು ವಜಾ ಮಾಡಬೇಕೆಂದು ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ರವರು ಈ ಕಾರ್ಯಾಲಯಕ್ಕೆ ವಿನಂತಿಸಿದ್ದಾರೆ.

ಈ ವಿಚಾರಣಾ ವರದಿ ಆಧರಿಸಿ ಸದರ ಶಿಕ್ಷಕರಿಗೆ ಈ ಕಾರ್ಯಾಲಯದಿಂದ ದಿನಾಂಕ: 24–09–2011 ರ ನೋಟಿಸ್ ಜಾರಿಗೊಳಿಸಲಾಗಿತ್ತು. ಆದರೆ ಅವರಿಂದ ಯಾವುದೇ ಲಿಖಿತ ಹೇಳಿಕೆ ಈ ಕಾರ್ಯಾಲಯಕ್ಕೆ ಸ್ವೀಕೃತಿಯಾಗಿರುವುದಿಲ್ಲ. ಮತ್ತು ಈ ಕುರಿತು ಅಂತಿಮವಾಗಿ ವಿಚಾರಣೆ ಮಾಡಿ ವರದಿ ಸಲ್ಲಿಸುವಂತೆ ಈ ಕಾರ್ಯಾಲಯದ ವಿಷಯ ಪರಿವೀಕ್ಷಕರಾದ ಶ್ರೀಮತಿ ವಿ.ಎಸ್. ಹಂದಿಗೋಳ ಇವರಿಗೆ ತಿಳಿಸಲಾಗಿತ್ತು. ಅದರಂತೆ ಶ್ರೀ ವಿ.ಎಸ್. ಹಂದಿಗೋಳ ವಿಷಯ ಪರಿವೀಕ್ಷಕರು ಇವರು ದಿನಾಂಕ: 03–05–2012 ಹಾಗೂ 14–01–2016 ರ ವರದಿ ಮೂಲಕ ಈ ಶಿಕ್ಷಕರು ಸೇವೆಯಲ್ಲಿ ಮುಂದುವರೆಯಲು ಆಸಕ್ತಿ ಇರುವುದಿಲ್ಲ. ಕಾರಣ ಇವರ ಮೇಲೆ ನಿಯಮಾನುಸಾರ ಸೂಕ್ತ ಕ್ರಮ ಜರುಗಿಸಬಹುದೆಂದು ತಿಳಿಸಿರುತ್ತಾರೆ. ಇದರಿಂದ ಈ ಶಿಕ್ಷಕರು ಅನಧಿಕೃತ ಗೈರ ಹಾಜರ ಇರುವುದು ಕಂಡು ಬಂದ ಕಾರಣ ಇವರನ್ನು ಸರಕಾರಿ ಸೇವೆಯಿಂದ ವಜಾಗೊಳಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಬಿ.ಸಿ. ಲಮಾಣಿ ಚಿತ್ರಕಲಾ ಶಿಕ್ಷಕರು ಸರಕಾರಿ ಪ್ರೌಢ ಶಾಲೆ ಚಟ್ಟರಕಿ ಶಾಲೆ ಗಬಸಾವಳಗಿ ತಾಲೂಕು ಸಿಂದಗಿ (ಲೀನ್ ಸರಕಾರಿ ಪ್ರೌಢ ಶಾಲೆ ಯಂಕಂಚಿ) ಇವರು ದಿನಾಂಕ: 07–08–2006 ರಿಂದ ಅನಧಿಕೃತ ಗೈರು ಉಳಿದಿರುವುದು ದೃಢಪಟ್ಟ ಕಾರಣ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯದ ಆದೇಶ ಸಂ.ಸಿ.ಆ.ಸು.ಇ–18–ಸೇ.ಇ.ವಿ.2001 ಬೆಂಗಳೂರು ದಿನಾಂಕ: 14–09–2001 ಹಾಗೂ ಕರ್ನಾಟಕ ಸರಕಾರಿ ಸೇವಾ ನಿಯಮಗಳು ನಿಯಮ 108 ರ ಪ್ರಕಾರ ಈ ಶಿಕ್ಷಕರು ಸರಕಾರಿ ಸೇವೆಗೆ ಸತತವಾಗಿ 10 ವರ್ಷ ಅನಧಿಕೃತ ಗೈರು ಉಳಿದಿರುವುದು ಧೃಡಪಟ್ಟ ಕಾರಣ ಶಿಸ್ತು ಪ್ರಾಧಿಕಾರಿಯಾದ ಎಸ್.ಎಸ್. ಬಿರಾದಾರ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ವಿಜಯಪುರ ಆದ ನಾನು ಕರ್ನಾಟಕ ಸರಕಾರಿ ಸೇವಾ ನಿಯಮಗಳು 1957 (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8(8) ರ ಮೇರೆಗೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಸಿ. ಲಮಾಣಿ ಚಿತ್ರಕಲಾ ಶಿಕ್ಷಕರು ಸರಕಾರಿ ಪ್ರೌಢ ಶಾಲೆ ಗಬಸಾವಳಗಿ (ಲೀನ್ ಸರಕಾರಿ ಪ್ರೌಢ ಶಾಲೆ ಯಂಕಂಚಿ) ಇವರನ್ನು ಸರಕಾರಿ ಸೇವೆಯಿಂದ ತಕ್ಷಣದಿಂದಲೇ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿದ್ದೇನೆ. ಕಾರಣ ಸಂಬಂಧಿಸಿದ ಅಧಿಕಾರಿಗಳು ಈ ಕುರಿತು ಅಗತ್ಯ ಕ್ರಮ ವಹಿಸಲು ತಿಳಿಸಿದೆ.

PR-344

**ಎಸ್.ಎಸ್. ಬಿರಾದಾರ**
ಉಪನಿರ್ದೇಶಕರು (ಆಡಳಿತ)
ಸಾರ್ವಜನಿಕ ಶಿಕ್ಷಣ ಇಲಾಖೆ. ವಿಜಯಪುರ

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ವಿಜಯಪುರ

### ಜ್ಞಾಪನ

**ಸಂ:ಇ1(ಎ)–7180: ದ್ವಿದಸ:ಸಪ್ರೌಶಾಯ:ರಾಅ:2015–16 ದಿನಾಂಕ: 26–02–2016**

**ವಿಷಯ :** ಶ್ರೀಮತಿ ಬಸೀರಾಬಾನು ನಿಡಗುಂದಿ, ದ್ವಿ.ದ.ಸ. ಸರ್ಕಾರಿ ಪ್ರೌಢ ಶಾಲೆ ಯಕ್ಕುಂಡಿ ಇವರು ಶಾಲಾ ಕೆಲಸಕ್ಕೆ ಗೈರ ಉಳಿದ ಪ್ರಯುಕ್ತ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಕುರಿತು.

**ಉಲ್ಲೇಖ :**
1. ಮುಖ್ಯೋಪಾಧ್ಯಯರು ಸರ್ಕಾರಿ ಪ್ರೌಢ ಶಾಲೆ ಯಕ್ಕುಂಡಿ ರವರ ಜ್ಞಾಪನ ಪತ್ರ ದಿನಾಂಕಗಳು : 13–05–2010, 31–05–2010, 17–06–2010, 14-7-2010, 18–08–2010, 02–07–2013, 27–07–2013.
2. ಕ್ಷೇತ್ರ ಶಿಕ್ಷಣಾಧಿಕಾರಿಗಳು ಗ್ರಾಮೀಣ ವಲಯ ವಿಜಯಪುರ ರವರ ಪತ್ರ ಸಂ:ಎ4:ಬಿಎಂನಿ: ದ್ವಿದಸ:ಗೈರ ಹಾಜರಿ: 2010–11, ದಿನಾಂಕ: 16–08–2010.
3. ಶ್ರೀಮತಿ ಬಸೀರಾಬಾನು ನಿಡಗುಂದಿ ದ್ವಿದಸ. ರವರ ಪತ್ರ ದಿನಾಂಕ: 10–08–2012.
4. ಈ ಕಾರ್ಯಾಲಯದ ಪತ್ರ ಸಮಸಂಖ್ಯೆ ದಿನಾಂಕ: 04–12–2015, 01–01–2016 ಹಾಗೂ 23–01–2016.
5. ಕ್ಷೇತ್ರ ಶಿಕ್ಷಣಾಧಿಕಾರಿಗಳು ಗ್ರಾಮೀಣ ವಲಯ ವಿಜಯಪುರ ರವರ ಪತ್ರ ಸಂ:ಎ4:ಬಿಎನ್ಎಸ್ಡಿಎ : ರಾಜಿನಾಮೆ: 2015–16 ದಿನಾಂಕ: 04–01–2016.

**ಪ್ರಸ್ತಾವನೆ :–**

ಶ್ರೀಮತಿ ಬಸೀರಾಬಾನು, ನಿಡಗುಂದಿ, ದ್ವಿ.ದ.ಸ. ಸರ್ಕಾರಿ ಪ್ರೌಢ ಶಾಲೆ ಯಕ್ಕುಂಡಿ ಇವರು ಶಾಲಾ ಕರ್ತವ್ಯಕ್ಕೆ ದಿನಾಂಕ: 31–03–2010 ರಿಂದ ಈ ವರೆಗೂ ಶಾಲಾ ಕೆಲಸಕ್ಕೆ ಗೈರ ಉಳಿದಿದ್ದು ಈ ಅವಧಿಯಲ್ಲಿ ಶಾಲೆಯ ಮುಖ್ಯೋಪಾಧ್ಯಾಯರು ಮೇಲಿನ ಉಲ್ಲೇಖ (1) ರ ಪತ್ರಗಳ ಮೂಲಕ ಇವರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಸಾಕಷ್ಟು ತಿಳುವಳಿಕೆ ಪತ್ರಗಳನ್ನು ಕೊಟ್ಟಿದ್ದರೂ ಇವರು ಶಾಲಾ ಕರ್ತವ್ಯಕ್ಕೆ ಹಾಜರಾಗದೇ ಅನಧೀಕೃತ ಗೈರ ಉಳಿದು ಮತ್ತು ಯಾವುದೇ ಪತ್ರಗಳನ್ನು ಸ್ವೀಕರಿಸಲು ನಿರಾಕರಿಸಿದ್ದಾರೆಂದು ಶಾಲೆಯ ಮುಖ್ಯೋಪಾಧ್ಯಾಯರು ಈ ಕಚೇರಿಗೆ ತಿಳಿಸಿರುತ್ತಾರೆ. ಅದರಂತೆ ಕ್ಷೇತ್ರ

ಶಿಕ್ಷಣಾಧಿಕಾರಿಗಳು ವಿಜಯಪುರ ಗ್ರಾಮೀಣ ವಲಯ ಇವರು ಉಲ್ಲೇಖ (2) ರ ಪ್ರಕಾರ ಈ ಕಾರ್ಯಾಲಯಕ್ಕೆ ಈ ಸಿಬ್ಬಂದಿಯವರು ಶಾಲಾ ಕೆಲಸಕ್ಕೆ ಅನಧೀಕೃತ ಗೈರ ಉಳಿದಿದ್ದು ಆದ್ದರಿಂದ ಇವರನ್ನು ಸೇವೆಯಿಂದ ವಜಾಗೊಳಿಸಬೇಕೆಂದು ಈ ಕಾರ್ಯಾಲಯಕ್ಕೆ ವಿನಂತಿಸಿದ್ದಾರೆ. ಉಲ್ಲೇಖ (3) ರ ಪ್ರಕಾರ ಸದರಿ ಸಿಬ್ಬಂದಿಯವರು ಸರ್ಕಾರದ ನಿಯಮಾನುಸಾರ ಸಮೂಚಿತ ಮಾರ್ಗದ ಮೂಲಕ ರಾಜಿನಾಮೆ ಕುರಿತು ಪ್ರಸ್ತಾವನೆ ಸಲ್ಲಿಸದೇ ನೇರವಾಗಿ ಈ ಕಾರ್ಯಾಲಯಕ್ಕೆ ರಾಜಿನಾಮೆ ಅಂಗೀಕರಿಸುವಂತೆ ಪತ್ರ ಬರೆದಿರುತ್ತಾರೆ. ಕಾರಣ ಇದು ಸರ್ಕಾರದ ನಿಯಮಾನುಸಾರ ಕ್ರಮಬದ್ಧವಲ್ಲದ ಕಾರಣ ಈ ಕುರಿತು ಪರಿಶೀಲಿಸಿ ವರದಿ ಸಲ್ಲಿಸುವಂತೆ ಉಲ್ಲೇಖ (4) ರ ಪ್ರಕಾರ ವರದಿ ಸಲ್ಲಿಸುವಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ವಿಜಯಪುರ ಗ್ರಾಮೀಣ ವಲಯ ಇವರಿಗೆ ಪತ್ರ ಬರೆಯಲಾಗಿತ್ತು. ಅದರಂತೆ ಉಲ್ಲೇಖ (5) ರ ಪ್ರಕಾರ ಈ ಕಾರ್ಯಾಲಯಕ್ಕೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ವರದಿ ಸಲ್ಲಿಸಿದ್ದು ಈ ವರದಿಯಲ್ಲಿ ಅವರು ಶ್ರೀಮತಿ ಬಿ.ಎಂ. ನಿಡಗುಂದಿ, ದ್ವಿದ.ಸ. ಸರ್ಕಾರಿ ಪ್ರೌಢ ಶಾಲೆ ಯಕ್ಕುಂಡಿ ಇವರು ಶಾಲಾ ಕೆಲಸಕ್ಕೆ ದಿನಾಂಕ: 31–03–2010 ರಿಂದ ಇಲ್ಲಿಯ ವರೆಗೂ ಅನಧೀಕೃತ ಗೈರ ಉಳಿದಿರುವದು ದೃಢಪಟ್ಟಿರುತ್ತದೆ ಕಾರಣ ಇವರ ಮೇಲೆ ಸೂಕ್ತ ಕ್ರಮ ಜರುಗಿಸಬೇಕೆಂದು ಈ ಕಾರ್ಯಾಲಯಕ್ಕೆ ಉಲ್ಲೇಖ (5) ರ ಪ್ರಕಾರ ಕ್ಷೇತ್ರ ಶಿಕ್ಷಣಾಧಿಕಾರಿಗಳು ವಿಜಯಪುರ ಗ್ರಾಮೀಣ ವಲಯ ಇವರು ವಿನಂತಿಸಿದ್ದಾರೆ.

ಅದರಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯದ ಆದೇಶ ಸಂಖ್ಯೆ: ಸಿಆಸುಇ:18:ಸೇಇವಿ: 2001 ಬೆಂಗಳೂರು ದಿನಾಂಕ: 14–09–2001 ರ ಪ್ರಕಾರ ಯಾವುದೇ ಸರ್ಕಾರಿ ನೌಕರರು ನಾಲ್ಕು ತಿಂಗಳಿಗಿಂತ ಅನಧೀಕೃತ ಗೈರ ಉಳಿದಲ್ಲಿ ಸೇವೆಯಿಂದ ವಜಾಗೊಳಿಸಬೇಕೆಂದು ಆದೇಶ ಇರುವ ಕಾರಣ ಇವರು ಸರ್ಕಾರಿ ಕೆಲಸಕ್ಕೆ ಗೈರ ಉಳಿದು ಸುಮಾರು ಆರು (6) ವರ್ಷಗಳು ಆದ ಪ್ರಯುಕ್ತ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವದು ಸೂಕ್ತವೆಂದು ಭಾವಿಸಿ ಈ ಕೆಳಗಿನಂತೆ ಆದೇಶಿಸಿದೆ.

ಪ್ರಸ್ತಾವನೆಯಲ್ಲಿಯ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀಮತಿ ಬಿ.ಎಂ. ನಿಡಗುಂದಿ, ದ್ವಿದ.ಸ. ಸರ್ಕಾರಿ ಪ್ರೌಢ ಶಾಲೆ ಯಕ್ಕುಂಡಿ ಇವರು ಶಾಲಾ ಕೆಲಸಕ್ಕೆ ದಿನಾಂಕ: 31–03–2010 ಈ ವರೆಗೂ ಶಾಲಾ ಕೆಲಸಕ್ಕೆ ಅನಧೀಕೃತ ಗೈರ ಉಳಿದು ಈ ಅವಧಿಯಲ್ಲಿ ಶಾಲೆಯ ಮುಖ್ಯೋಪಾಧ್ಯಾಯರು ಸಾಕಷ್ಟು ತಿಳುವಳಿಕೆ ಪತ್ರಗಳನ್ನು ಕೊಟ್ಟರೂ ಸದರಿ ಪತ್ರಗಳನ್ನು ಸ್ವೀಕರಿಸದೇ ಮತ್ತು ಲಿಖಿತ ಹೇಳಿಕೆಯನ್ನು ಸಲ್ಲಿಸದೇ ಇವರು ಸರ್ಕಾರಿ ಸೇವೆಯಲ್ಲಿ ಮುಂದುವರೆಯುವದು ಆಸಕ್ತಿ ಇಲ್ಲದೇ ಇರುವ ಪ್ರಯುಕ್ತ ಇವರನ್ನು ಸೇವೆಯಿಂದ ವಜಾ ಮಾಡುವಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ವಿಜಯಪುರ ಗ್ರಾಮೀಣ ವಲಯ ಇವರು ಈ ಕಾರ್ಯಾಲಯಕ್ಕೆ ವಿನಂತಿಸಿದ ಕಾರಣ ಕ್ಷೇತ್ರ ಶಿಕ್ಷಣಾಧಿಕಾರಿಗಳು ವಿಜಯಪುರ ಗ್ರಾಮೀಣ ಇವರ ವರದಿ ಆಧರಿಸಿ ಶ್ರೀಮತಿ ಬಿ.ಎಂ. ನಿಡಗುಂದಿ, ದ್ವಿದ.ಸ. ಸರ್ಕಾರಿ ಪ್ರೌಢ ಶಾಲೆ ಯಕ್ಕುಂಡಿ ಇವರನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು ನಿಯಮ 108 ರ ಪ್ರಕಾರ ಈ ಸಿಬ್ಬಂದಿಯವರು ಸತತವಾಗಿ ಆರು (6) ವರ್ಷ ಅನಧೀಕೃತ ಗೈರ ಉಳಿದಿರುವದು ದೃಢಪಟ್ಟ ಕಾರಣ ಶಿಸ್ತು ಪ್ರಾಧಿಕಾರಿಯಾದ ಎಸ್.ಎಸ್. ಬಿರಾದಾರ, ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ ವಿಜಯಪುರ ಆದ ನಾನು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು 1957 (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮ 8 (VIII) ರ ಮೇರೆಗೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಸಿದ್ದೇನೆ. ಕಾರಣ ಸಂಬಂಧಿಸಿದ ಅಧಿಕಾರಿಗಳು ಈ ಕುರಿತು ಅಗತ್ಯ ಕ್ರಮ ವಹಿಸಲು ತಿಳಿಸಿದೆ.

**PR-345**

**ಎಸ್.ಎಸ್. ಬಿರಾದಾರ**
ಉಪನಿರ್ದೇಶಕರು (ಆಡಳಿತ)
ಸಾರ್ವಜನಿಕ ಶಿಕ್ಷಣ ಇಲಾಖೆ. ವಿಜಯಪುರ

**ತಿಪಟೂರು ಯೋಜನಾ ಪ್ರಾಧಿಕಾರ, ತಿಪಟೂರು ಬಿ.ಹೆಚ್.ರಸ್ತೆ, ತಿಪಟೂರು –572201.**

**ಪ್ರಕಟಣೆ**

**ಸಂಖ್ಯೆ: ತಿ.ಯೋ.ಪ್ರಾ/ಮಯೋತ/01/2015–16 ದಿನಾಂಕ: 02/04/2016**

**ವಿಷಯ :** ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಕಲಂ 10ರನ್ವಯ ತಿಪಟೂರು ನಗರದ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾಯೋಜನೆ ತಯಾರಿಸುವ ಇಚ್ಛೆಯನ್ನು ಘೋಷಿಸುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಕಲಂ 10ರಡಿಯಲ್ಲಿ ತಿಪಟೂರು ನಗರದ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾಯೋಜನೆ ತಯಾರಿಸುವ ಇಚ್ಛೆಯನ್ನು ಘೋಷಿಸಿದೆ.

ಸಾರ್ವಜನಿಕರಿಂದ ಹಾಗೂ ಸ್ಥಳೀಯ ಸಂಸ್ಥೆಗಳಿಂದ ಸದರಿ ವಿಷಯದ ಬಗ್ಗೆ ಸಲಹೆಗಳನ್ನು ಈ ಪ್ರಕಟಣೆ ದಿನಾಂಕದಿಂದ 2 ತಿಂಗಳ ಒಳಗಾಗಿ ಖುದ್ದಾಗಿ ಅಥವಾ ಅಂಚೆ ಮೂಲಕ ಈ ವಿಳಾಸಕ್ಕೆ ಕಳುಹಿಸಿಕೊಡಲು ಕೋರಲಾಗಿದೆ.

**PD 48**
**S.C. 05**

**ಸದಸ್ಯ ಕಾರ್ಯದರ್ಶಿ**
ತಿಪಟೂರು ಯೋಜನಾ ಪ್ರಾಧಿಕಾರ,
ತಿಪಟೂರು.

**ಪಟ್ಟಣ ಪಂಚಾಯ್ತಿ ಕಾರ್ಯಾಲಯ, ಶೃಂಗೇರಿ. ಚಿಕ್ಕಮಗಳೂರು ಜಿಲ್ಲೆ–577 139.**

**ಪ್ರಕಟಣೆ**

**ಸಂಖ್ಯೆ : ಶೃಂ.ಪ.ಪಂ. ಸಿ(4) ಪ್ರ.ವಾ.ದ.ಪ.ಸಿ.ಆರ್.01/2015–16, ದಿನಾಂಕ: 14–01–2016.**

ಶೃಂಗೇರಿ ಪಟ್ಟಣ ಪಂಚಾಯ್ತಿ ವ್ಯಾಪ್ತಿಯಲ್ಲಿ ಪಟ್ಟಣ ಪಂಚಾಯ್ತಿ ಆದಾಯವನ್ನು ಹೆಚ್ಚಿಸುವ ಬಗ್ಗೆ ಪ್ರವಾಸಿ ವಾಹನಗಳ ಪ್ರವೇಶಾತಿ ಶುಲ್ಕ ವಸೂಲಾತಿ ಹಾಗೂ ಇತರೆ ಕೆಲವು ಬಾಬುಗಳ ದರಗಳನ್ನು ಪರಿಷ್ಕರಿಸಲು ಶೃಂಗೇರಿ ಪಟ್ಟಣ ಪಂಚಾಯ್ತಿಯ ಅಧ್ಯಕ್ಷರಾದ ಶ್ರೀಮತಿ ಶೋಭಾ ಅನಂತಯ್ಯ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 13–01–2016 ರಂದು ನಡೆದ ಸಾಮಾನ್ಯ ಸಭೆಯ ವಿಷಯದ ನಂ: 16 ರಲ್ಲಿ ತೀರ್ಮಾನಿಸಲಾಗಿದೆ. ಕರ್ನಾಟಕ ಪುರಸಭೆಗಳ

ಕಾಯ್ದೆ 1964ರ ಕಲಂ 334 ರಂತೆ ದಿನಾಂಕ: 01–04–2016 ರಿಂದಲೇ ಜಾರಿಗೆ ಬರುವಂತೆ ಪ್ರವಾಸಿ ವಾಹನಗಳ ಪ್ರವೇಶಾತಿ ಶುಲ್ಕಗಳನ್ನು, ಬೈಕ್ (ದ್ವಿಚಕ್ರ ವಾಹನ) ಹಾಗೂ ಗಾಂಧಿ ಮೈದಾನದಲ್ಲಿ ಸಂಚಾರಿ ತಳ್ಳುವ ಗಾಡಿಗಳ ಸ್ವಚ್ಛತೆಯ ಫೀ ಬಾಬ್ತು (ಒಂದಕ್ಕೆ) ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ. ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಪ್ರಕಟಣೆಯಾದ 30 ದಿನಗಳ ಒಳಗಾಗಿ ಸಕಾರಣ ಸಹಿತ ಸಲ್ಲಿಸಲು ಸಾರ್ವಜನಿಕರಿಗೆ ಅವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಹಾಲಿ ವಸೂಲಿ ಮಾಡುತ್ತಿರುವ ಕೆಲವು ಬಾಬುಗಳ ಶುಲ್ಕವಾರು ಪರಿಷ್ಕರಣೆ ಪಟ್ಟಿ.**

| ಕ್ರ. ಸಂ. | ವಿಷಯ | ಹಾಲಿ ಇರುವ ದರ | ಪರಿಷ್ಕೃತ ದರ (01–04–2016 ರಿಂದ ಜಾರಿಗೆ) |
|---|---|---|---|
| 1 | ಕಾರು ಒಂದಕ್ಕೆ (ಜನಸವಾರಿ 1 ರಿಂದ 6 ರವರೆಗೆ), | ರೂ. 20/ | ರೂ. 30/ |
| 2 | ಟ್ರ್ಯಾಕ್ಸ್, ಟಾಟಾ ಸುಮೋ (ಜನಸವಾರಿ 7 ರಿಂದ 15 ರವರೆಗೆ) | ರೂ. 30/ | ರೂ. 40/ |
| 3 | ಬಸ್, ಟ್ರಕ್, ಟೆಂಪೋ (ಜನಸವಾರಿ 16 ಕ್ಕಿಂತ ಹೆಚ್ಚು) | ರೂ. 40/ | ರೂ. 50/ |
| 4 | ಬೈಕ್ (ದ್ವಿಚಕ್ರ ವಾಹನ) | ರೂ. 10/ | ರೂ. 10/ |
| 5 | ಗಾಂಧಿ ಮೈದಾನದಲ್ಲಿ ಸಂಚಾರಿ ತಳ್ಳುವ ಗಾಡಿಗಳ ಸ್ವಚ್ಛತೆಯ ಫೀ ಬಾಬ್ತು (ಒಂದಕ್ಕೆ) | ರೂ. 25/ | ರೂ. 25/ |

| | | | |
|---|---|---|---|
| **(ಶೋಭಾ ಅನಂತಯ್ಯ)** | **(ಡಾ: ಲಕ್ಷ್ಮಿ. ಎನ್. ಪ್ರಸಾದ್)** | **(ಸಾದಿಕ್ ಅಹಮ್ಮದ್)** | **ಟಿ.ಜೆ. ಅಶೋಕ** |
| ಅಧ್ಯಕ್ಷರು | ಉಪಾಧ್ಯಕ್ಷರು | ಅಧ್ಯಕ್ಷರು, ಸ್ಥಾಯಿ ಸಮಿತಿ, | ಮುಖ್ಯಾಧಿಕಾರಿ |
| ಪಟ್ಟಣ ಪಂಚಾಯ್ತಿ ಶೃಂಗೇರಿ | ಸದಸ್ಯರು, ಪ.ಪಂ. ಶೃಂಗೇರಿ | ಪ.ಪಂ. ಶೃಂಗೇರಿ | ಪಟ್ಟಣ ಪಂಚಾಯ್ತಿ, ಶೃಂಗೇರಿ |

**ಶೃಂಗೇರಿ ಪಟ್ಟಣ ಪಂಚಾಯ್ತಿಯ ಸಾಮಾನ್ಯ ಸಭೆಯನ್ನು ದಿನಾಂಕ: 13–01–2016 ಬುಧವಾರ ಅಪರಾಹ್ನ 3–00 ಗಂಟೆಗೆ ಸರಿಯಾಗಿ ಪಟ್ಟಣ ಪಂಚಾಯ್ತಿ ಸಭಾಂಗಣದಲ್ಲಿ ಪಟ್ಟಣ ಪಂಚಾಯ್ತಿ ಅಧ್ಯಕ್ಷರಾದ ಶ್ರೀಮತಿ ಶೋಭಾ ಅನಂತಯ್ಯರವರ ಅಧ್ಯಕ್ಷತೆಯಲ್ಲಿ ನಡೆದ ಸಾಮಾನ್ಯ ಸಭೆಯ ನಡವಳಿಗಳು.**

| | | | |
|---|---|---|---|
| **ಚುನಾಯಿತ ಸದಸ್ಯರು** | **ಹಾಜರಿ:11** | **ಗೈರುಹಾಜರಿ:00** | **ಒಟ್ಟು:11** |
| **ನಾಮ ನಿರ್ದೇಶನ ಸದಸ್ಯರು** | **ಹಾಜರಿ:03** | **ಗೈರುಹಾಜರಿ:00** | **ಒಟ್ಟು:03** |
| **ಶಾಸಕರು** | **ಹಾಜರಿ:00** | **ಗೈರುಹಾಜರಿ:01** | **ಒಟ್ಟು:01** |
| **ಸಂಸದರು** | **ಹಾಜರಿ:00** | **ಗೈರುಹಾಜರಿ:01** | **ಒಟ್ಟು:01** |

**ವಿಷಯದ ಸಂ:**16 2016–17 ನೇ ಸಾಲಿಗೆ ಪಟ್ಟಣ ಪಂಚಾಯ್ತಿ ವ್ಯಾಪ್ತಿಯ ಸಂತೆ ಸುಂಕ ಬಸ್‌ಸ್ಟ್ಯಾಂಡ್ ಸುಂಕ ಪ್ರವಾಸಿ ವಾಹನಗಳ ಪ್ರವೇಶಾತಿ ಶುಲ್ಕ ವಸೂಲಾತಿ, ತಳ್ಳುವ ಗಾಡಿ, ಗಾಂಧಿ ಮೈದಾನದ ತಾತ್ಕಾಲಿಕ ಶೆಡ್‌ಗಳ ಸ್ವಚ್ಛತಾ ಫೀ– ವಸೂಲಿ ಮತ್ತು ಪ್ರವಾಸಿಗರ ಅಡುಗೆ ಮಾಡುವಂತಹ ನೆಲಬಾಡಿಗೆ ಫೀ ವಸೂಲಾತಿ ಹಾಗೂ ವಿವಿಧ ಬಾಬುವಾರು ಮಳಿಗೆಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ ಚರ್ಚಿಸುವ ವಿಚಾರ.

**ತೀರ್ಮಾನ:** ಈ ಬಗ್ಗೆ ಪರಿಶೀಲಿಸಿ ಮುಖ್ಯಾಧಿಕಾರಿಗಳು ಸರ್ಕಾರಿ ಸುತ್ತೋಲೆಯಂತೆ ಕ್ರಮ ವಹಿಸಬಹುದೆಂದು ಸಭೆಯಲ್ಲಿ ಪ್ರಸ್ತಾಪಿಸಲಾಗಿದ್ದು, ಆದರೆ, ಸಭೆಯು

1. **ಮಾರ್ಕೆಟ್‌ನಲ್ಲಿರುವ ಮೀನು ಅಂಗಡಿಗಳು :–** ಶೃಂಗೇರಿ ಪಟ್ಟಣ ಪಂಚಾಯ್ತಿ ಶಾರದಾನಗರದಲ್ಲಿರುವ ಎ.ಪಿ.ಎಂ.ಸಿ. ಕಟ್ಟಡದ, ಮೀನು, ಮಾರುಕಟ್ಟೆಯಲ್ಲಿರುವ ಮಳಿಗೆಗಳು ಪಟ್ಟಣದ ಮಧ್ಯಭಾಗದಲ್ಲಿರುವುದರಿಂದ ಮೀನು, ಮಾಂಸ. ಕಸಾಯಿಖಾನೆಗಳು ಒಂದೇ ಕಡೆ ಇರುವಂತೆ ಊರಿನ ಹೊರವಲಯದಲ್ಲಿ ವ್ಯವಸ್ಥೆ ಮಾಡಲು ಪಟ್ಟಣದ ಹೊರವಲಯಕ್ಕೆ ಸ್ಥಳಾಂತರಿಸಲು ಈಗಾಗಲೇ ಜಾಗ ನೀಡಲು ತಾಲ್ಲೂಕ್ ತಹಶೀಲ್ದಾರ್‌ರವರಿಗೆ ಪತ್ರ ಬರೆಯಲಾಗಿದೆ. ಅಲ್ಲಿಯವರೆಗೆ ಪಟ್ಟಣ ಪಂಚಾಯ್ತಿಗೆ ಅವಶ್ಯಕವಿದ್ದಲ್ಲಿ ಮಳಿಗೆಯನ್ನು ಬಿಟ್ಟುಕೊಡುವ ಷರತ್ತು ವಿಧಿಸಿ ಈ ಹಿಂದಿನಂತೆಯೇ ಒಂದು ವರ್ಷದ ಅವಧಿಗೆ ಹರಾಜು ಪ್ರಕ್ರಿಯೆ ಮಾಡಲು ಕ್ರಮವಹಿಸುವಂತೆ ಸಭೆಯಲ್ಲಿ ಒಪ್ಪಿ ತೀರ್ಮಾನಿಸಲಾಯಿತು.
2. **ಕಛೇರಿ ಮುಂಭಾಗದಲ್ಲಿರುವ ಮಳಿಗೆಗಳು :–** ಶೃಂಗೇರಿ ಪಟ್ಟಣ ಪಂಚಾಯ್ತಿ ಕಛೇರಿ ಮುಂಭಾಗದಲ್ಲಿ ವಾಣಿಜ್ಯ ಮಳಿಗೆಗಳ ಕಟ್ಟಡವಿದ್ದು, ಈ ಕಟ್ಟಡದಲ್ಲಿರುವ ಮಳಿಗೆಗಳು ತುಂಬಾ ಹಳೆಯದಾಗಿದ್ದು ಶಿಥಿಲಗೊಂಡಿರುತ್ತದೆ. ಮಳಿಗೆಗಳು ರಸ್ತೆ ಮಾರ್ಜಿನ್‌ನಲ್ಲಿರುತ್ತದೆ. ಮುಂದಿನ ದಿನಗಳಲ್ಲಿ ರಸ್ತೆ ಅಗಲೀಕರಣವಾಗುವ ಸಂದರ್ಭವಿರುವುದರಿಂದ, ಮಳಿಗೆಗಳನ್ನು ಸರ್ಕಾರಿ ಸುತ್ತೋಲೆ ಪ್ರಕಾರ ಹರಾಜು ಮಾಡಲು ಸಾಧ್ಯವಾಗದೇ ಇರುವುದರಿಂದ ಪಟ್ಟಣ ಪಂಚಾಯ್ತಿಗೆ ಅವಶ್ಯಕವಿದ್ದಲ್ಲಿ ಮಳಿಗೆಯನ್ನು ಬಿಟ್ಟುಕೊಡುವ ಷರತ್ತು ವಿಧಿಸಿ ಈ ಹಿಂದಿನಂತೆಯೇ ಒಂದು ವರ್ಷದ ಅವಧಿಗೆ ಹರಾಜು ಪ್ರಕ್ರಿಯೆ ಮಾಡಬಹುದೆಂದು ಸಭೆಯಲ್ಲಿ ಒಪ್ಪಿ ತೀರ್ಮಾನಿಸಲಾಯಿತು.
3. **ಸಂತೆ ಸುಂಕ ವಸೂಲಿ, ಬಸ್‌ಸ್ಟ್ಯಾಂಡ್ ಸುಂಕ ವಸೂಲಿ ಹಾಗೂ ಪ್ರವಾಸಿ ವಾಹನ ಪ್ರವೇಶಾತಿ ಶುಲ್ಕ ವಸೂಲಾತಿ :–** ಸದರಿ ಬಾಬುಗಳನ್ನು ಒಂದು ವರ್ಷದ ಅವಧಿಗೆ ಹರಾಜು ಮಾಡಬಹುದೆಂದು ಹರಾಜು ಖೈದಾದ ಕೂಡಲೇ ಅಂತಿಮ ಬಿಡ್‌ದಾರರುಗಳಿಂದ ಬಿಡ್ ಮೊಬಲಗಿನ ಶೇ. 75% ರಷ್ಟು ಮೊತ್ತವನ್ನು ಏಕಗಂಟಿನಲ್ಲಿ ಪಾವತಿಸಿಕೊಂಡು ಉಳಿದ ಮೊತ್ತವನ್ನು ದಿನಾಂಕ: 01.04.2016 ರಿಂದ 31–07–2016 ರ ಅವಧಿಯೊಳಗೆ 4 ಸಮಾನ ಕಂತುಗಳಲ್ಲಿ ಪಾವತಿಸಿಕೊಳ್ಳುವಂತೆ ಹಾಗೂ ಪ್ರವಾಸಿ ವಾಹನ ಪ್ರವೇಶಾತಿ ಶುಲ್ಕ ವಾಹನಗಳಿಗೆ ಈ ಹಿಂದೆ ಇದ್ದ ದರಕ್ಕೆ ರೂ: 10 ರಂತೆ ಹೆಚ್ಚಿಸಿ 1) ಕಾರು ಒಂದಕ್ಕೆ ರೂ: 30/– (ಜನಸವಾರಿ 1 ರಿಂದ 6ರ ವರೆಗೆ), 2) ಟ್ರ್ಯಾಕ್ಸ್, ಟಾಟಾ ಸುಮೋ ರೂ. 40/– (ಜನಸವಾರಿ 7ರಿಂದ 15ರವರೆಗೆ), 1) ಬಸ್, ಟ್ರಕ್, ಟೆಂಪೋ ರೂ: 50/– (ಜನಸವಾರಿ 16ಕ್ಕಿಂತ ಹೆಚ್ಚು), 4) ಬೈಕ್ (ದ್ವಿಚಕ್ರವಾಹನ) ರೂ: 10/– ಹಾಗೂ 5) ಗಾಂಧೀ ಮೈದಾನದಲ್ಲಿ ಸಂಚಾರಿ ತಳ್ಳುವ ಗಾಡಿಗಳ ಸ್ವಚ್ಛತೆಯ ಫೀ ಬಾಬ್ತು ರೂ. 25/– ರಂತೆ ಶುಲ್ಕವನ್ನು ಪರಿಷ್ಕರಿಸಿಕೊಂಡು ಹರಾಜುಮಾಡಲು ಸಭೆಯಲ್ಲಿ ಸರ್ವಾನುಮತದಿಂದ ಒಪ್ಪಿ ತೀರ್ಮಾನಿಸಲಾಯಿತು.

ಸಹಕಾರ ಸಾರಿಗೆ ಬುಕ್ಕಿಂಗ್ ಆಫೀಸಿಗೆ ಹಾಗೂ ಖಾಸಗಿ ಬಸ್ ಏಜೆಂಟರಿಗೆ ನೀಡಿರುವ ಮಳಿಗೆಗಳನ್ನು ಹಾಲಿ ಇರುವವರುಗಳಿಗೆ ಶೇ10% ಬಾಡಿಗೆ ಹೆಚ್ಚಿಸಿ ನೀಡಬಹುದೆಂತಲೂ, ಹಾಗೂ ಶಾರದಾನಗರದಲ್ಲಿರುವ ಎ.ಪಿ.ಎಂ.ಸಿ. ಕಟ್ಟಡದಲ್ಲಿರುವ ಶಿಶು ಅಭಿವೃದ್ಧಿ ಇಲಾಖೆಗೆ ಆಹಾರ ದಾಸ್ತಾನುವಿಗೆ ನೀಡಿರುವ ಮಳಿಗೆಗೆ ಈ ಮಾಸಿಕ ಬಾಡಿಗೆ ರೂ. 500/–ನ್ನು ಪಾವತಿಸಿಕೊಂಡು ಒಂದು (1) ವರ್ಷದವರೆಗೆ ಮುಂದುವರೆಸಿಕೊಡಬಹುದೆಂದು ಮೇಲ್ಕಂಡಂತೆ ಕ್ರ.ಸಂ 1 ಮತ್ತು 2ರ ಬಗ್ಗೆ ಮಾನ್ಯ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆದು ಕ್ರಮವಹಿಸಬಹುದೆಂತಲು, ತಳ್ಳುವ ಗಾಡಿ, ಗಾಂಧಿ ಮೈದಾನದ ತಾತ್ಕಾಲಿಕ ಶೆಡ್‌ಗಳ ಸ್ವಚ್ಛತಾ ಫೀ ವಸೂಲಿ ಮತ್ತು ಪ್ರವಾಸಿಗರ ಅಡುಗೆ ಮಾಡುವಂತಹ ನೆಲಬಾಡಿಗೆ ಫೀ ವಸೂಲಾತಿಯನ್ನು ಹಿಂದಿನಂತೆ ಕಛೇರಿಯಿಂದಲೇ ವಸೂಲಾತಿ ಮಾಡಲು ಹಾಗೂ ಗಾಂಧಿ ಮೈದಾನದಲ್ಲಿ ಸಂಚಾರಿ ತಳ್ಳುವ ಗಾಡಿಗಳ ಸ್ವಚ್ಛತೆಯ ಫೀ ಬಾಬ್ತು ರೂ.: 25/– ರಂತೆ, ಪ್ರವಾಸಿ ವಾಹನಗಳ ಪ್ರವೇಶಾತಿ ಶುಲ್ಕದ ದರಗಳನ್ನು ಪರಿಷ್ಕರಿಸಿ, ಪರಿಷ್ಕೃತ ದರವನ್ನು ಸಭೆಯಲ್ಲಿ ಚರ್ಚಿಸಿ, ನಿಗಧಿಸಿದೆ. ಅದರಂತೆ ಸದರಿ ದರಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ದಿನಾಂಕ : 01–04–2016 ರಿಂದ ಜಾರಿಗೆ ಬರುವಂತೆ ವಸೂಲಿ ಕ್ರಮ ವಹಿಸಬಹುದೆಂದು ಸಭೆಯಲ್ಲಿ ಸರ್ವಾನುಮತದಿಂದ ಒಪ್ಪಿ ತೀರ್ಮಾನಿಸಲಾಯಿತು.

**ಹಾಲಿ ವಸೂಲಿ ಮಾಡುತ್ತಿರುವ ಕೆಲವು ಬಾಬುಗಳ ಶುಲ್ಕವಾರು ಪರಿಷ್ಕರಣೆ ಪಟ್ಟಿ.**

| ಕ್ರ.ಸಂ. | ವಿಷಯ | ಹಾಲಿ ಇರುವ ದರ | ಪರಿಷ್ಕೃತ ದರ (01–04–2016 ರಿಂದ ಜಾರಿಗೆ) |
|---|---|---|---|
| 1 | ಕಾರು ಒಂದಕ್ಕೆ (ಜನಸವಾರಿ 1 ರಿಂದ 6 ರವರೆಗೆ), | ರೂ. 20/– | ರೂ. 30/– |
| 2 | ಟ್ರ್ಯಾಕ್ಸ್, ಟಾಟಾ ಸುಮೋ (ಜನಸವಾರಿ 7 ರಿಂದ 15 ರವರೆಗೆ), | ರೂ. 30/– | ರೂ. 40/– |
| 3 | ಬಸ್, ಟ್ರಕ್, ಟೆಂಪೋ (ಜನಸವಾರಿ 16 ಕ್ಕಿಂತ ಹೆಚ್ಚು) | ರೂ. 40/– | ರೂ. 50/– |
| 4 | ಬೈಕ್ (ದ್ವಿಚಕ್ರ ವಾಹನ) | ರೂ. 10/– | ರೂ. 10/– |
| 5 | ಗಾಂಧಿ ಮೈದಾನದಲ್ಲಿ ಸಂಚಾರಿ ತಳ್ಳುವ ಗಾಡಿಗಳ ಸ್ವಚ್ಛತೆಯ ಫೀ ಬಾಬ್ತು (ಒಂದಕ್ಕೆ) | ರೂ. 25/– | ರೂ. 25/ |

**PD 49**
**SC-05**

**ಮುಖ್ಯಾಧಿಕಾರಿ**
ಪಟ್ಟಣ ಪಂಚಾಯ್ತಿ, ಶೃಂಗೇರಿ

**ಅಧ್ಯಕ್ಷರು**
ಪಟ್ಟಣ ಪಂಚಾಯ್ತಿ
ಶೃಂಗೇರಿ:

## ಸಾರಿಗೆ ಇಲಾಖೆ

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ದಾವಣಗೆರೆ ಇವರ ಕಛೇರಿ ನಡಾವಳಿ,**

**ಉಪಸ್ಥಿತರು: ಹೆಚ್.ಜೆ. ತೆಂಬದ್,**
**ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ**
**ನೋಂದಣಿ ಪ್ರಾಧಿಕಾರ**
**ದಾವಣಗೆರೆ**

**ವಿಷಯ :** ವಾಹನ ಸಂಖ್ಯೆ: KA-17/A-3874 (LGV) ರ ನೋಂದಣಿಯನ್ನು ರದ್ದು ಪಡಿಸುವ ಬಗ್ಗೆ.

**ಉಲ್ಲೇಖ :** 1. ಮಾಲೀಕರ ಅರ್ಜಿ ದಿನಾಂಕ: 28–03–2016.
2. ಮೋಟಾರು ವಾಹನ ನಿರೀಕ್ಷಕರ ವರದಿ ದಿನಾಂಕ: 31–03–2016.

**ಪ್ರಸ್ತಾವನೆ :**

ವಾಹನ ಸಂಖ್ಯೆ KA-17/A-3874 (LGV) ರ ಮಾಲೀಕರಾದ ಶ್ರೀ ಸಾಧಿಕ್ ಬಿನ್ ಹುಸೇನ್ ಸಾಬ್, # 20, ಚಿಲ್ಲೂರು, ಹೊನ್ನಾಳಿ (ತಾ) ದಾವಣಗೆರೆ, ಮೇಲ್ಕಂಡ ವಾಹನವು ದುಸ್ಥಿತಿಯಲ್ಲಿರುವುದಾಗಿ ತಿಳಿಸಿ ಸದರಿ ವಾಹನದ ನೋಂದಣಿ ರದ್ದತಿಗೆ ದಿನಾಂಕ: 28.03.2016 ರಂದು ಮನವಿ ಮಾಡಿರುತ್ತಾರೆ. ವಾಹನವು 2006ರ ಮಾದರಿಯಾಗಿದ್ದು ರಸ್ತೆಯಲ್ಲಿ ಓಡಿಸಲು ಯೋಗ್ಯವಾಗಿರುವುದಿಲ್ಲವೆಂದು ತಿಳಿಸಿರುವುದರ ಮೂಲಕ ಮೇಲ್ಕಂಡ ವಾಹನದ ನೋಂದಣಿಯನ್ನು ರದ್ದುಪಡಿಸಬಹುದಾಗಿ ಮೋಟಾರು ವಾಹನ ನಿರೀಕ್ಷಕರು ದಿನಾಂಕ: 31–03–2016ರ ಉಲ್ಲೇಖ (2) ರಲ್ಲಿ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ, ವಾಹನ ಸಂಖ್ಯೆ: KA-17/A-3874 (LGV) ರ ನೋಂದಣಿಯನ್ನು ರದ್ದು ಪಡಿಸಲು ಆದೇಶಿಸಿದೆ.

**ಆದೇಶ**

**ಸಂಖ್ಯೆ .ಪ್ರಾ. ಸಾ. ಅ.ನೋ.ವಿ** – 01/2015-16 KA-17/A-3874 (LGV) **ದಿನಾಂಕ 31–03–2016**.

ಹೆಚ್.ಜೆ. ತೆಂಬದ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ದಾವಣಗೆರೆ, ಆದ ನಾನು ನನಗೆ 1988ರ ಕೇಂದ್ರ ಮೋಟಾರು ವಾಹನ ಕಾಯ್ದೆ 55(1) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ಕಾರಣಗಳಿಂದಾಗಿ ಮೋ/ವಾ/ಸಂ: KA-17/A-3874 (LGV)ರ ಮೇಲೆ ಮುಂದೆ ಏನಾದರೂ ತೆರಿಗೆ, ಆಡಿಟ್ ಹಾಗೂ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೆ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಪಡಿಸುತ್ತೇನೆ.

ವಾಹನದ ವಿವರಗಳು

| | | |
|---|---|---|
| 01 | ಮೋಟಾರು ವಾಹನ ಸಂಖ್ಯೆ | KA-17/A-3874 |
| 02 | ವಾಹನದ ನೋಂದಣಿ ದಿನಾಂಕ | 26-09-2006 |
| 03 | ವಾಹನದ ತಯಾರಕನ ಹೆಸರು | Bajaj Auto Ltd |
| 04 | ವಾಹನದ ವರ್ಗ | LGV |
| 05 | ವಾಹನ ತಯಾರಿಕೆ ವರ್ಷ | 2006 |
| 06 | ಚಾಸಿಸ್ ಸಂಖ್ಯೆ | MD2ALAZZNWCO6640 |
| 07 | ಯಂತ್ರ ಸಂಖ್ಯೆ | AL MBNB08674 |
| 08 | ತೆರಿಗೆ ಅವಧಿ | LTT |
| 09 | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಸಾಧಿಕ್ ಬಿನ್ ಹುಸೇನ್ ಸಾಬ್, #20, ಚಿಲ್ಲೂರು, ಹೊನ್ನಾಳಿ (ತಾ), ದಾವಣಗೆರೆ |

**P.R. 353**

**ಹೆಚ್.ಜೆ. ತೆಂಬದ್,**
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ
ನೋಂದಣಾಧಿಕಾರಿಗಳು, ದಾವಣಗೆರೆ

## IN THE COURT OF 5TH ADDITIONAL CHIEF METROPOLITAN MAGISTRATE COURT, BENGALURU CITY,

### NOTIFICATION Date: 31.03.2016

It is hereby notified for the information of the public that the under mentioned two wheelers & three wheelers which is in the custody of Kamakshipalya police station Bengaluru city has unclaimed shall be confiscated to the Government and Disposed to law, if not claimed by the owner with proof of ownership with in one month from the date of the publication of this notification.

| ಕ್ರ.ಸಂ. | ವಾಹನದ ಸಂಖ್ಯೆ | ವಾಹನದ ಸ್ವರೂಪ | ಚಾಸೀಸ್ ನಂಬರ್ | ಇಂಜಿನ್ ನಂಬರ್ | ಪಿ.ಎಫ್ ನಂಬರ್ |
|---|---|---|---|---|---|
| 1 | KA-02-ES-2407 | ಹೀರೋ ಹೊಂಡಾ ಗ್ಲಾಮರ್ | 05FAMC00419 | 05FAMM00535 | PT NO-72/16<br>PF NO-8/16 |
| 2 | KA-14-EF-9644 | ಬಜಾಜ್ ಡಿಸ್ಕವರಿ | MD2A14AZ5EWL07698 | JBZW K33570 | PT NO-72/16<br>PF-NO-8/16 |
| 3 | KA-02-EB-1694 | ಬಜಾಜ್ ಸಿಟಿ 100 | - | 00F3E04185 | PT NO-72/16<br>PF NO-8/16 |
| 4 | KA-51-Q-8667 | ಬಜಾಜ್ ಪಲ್ಸರ್ | DHUBMC50558 | DHGBMC49389 | PT NO-72/1<br>PF NO-8/16 |
| 5 | KA-04-ED-2401 | ಆಕ್ಟೀವ್ ಹೊಂಡಾ | - | | PT NO-72/16<br>PF NO-8/16 |
| 6 | KA-01-L-5213 | ಕೆನೆಟಿಕ್ ಹೊಂಡಾ | ----- | ----- | PT NO-76/16<br>PF NO-12/16 |
| 7 | KA-01-V-5728 | ಬಜಾಜ್ ಡಿಸ್ಕವರಿ | MD2DSPAZZUWE41671 | JBMBVE35302 | PF NO 136/14 |
| 8 | KA-02-HC-7843 | ಬಜಾಜ್ ಪಲ್ಸರ್ | MD2DHDHZZRCC17357 | DHGBRC19636 | PT NO-76/16<br>PF NO-12/16 |
| 9 | KA-41-E-8841 | ಹೀರೋ ಹೋಂಡಾ ಸ್ಲೆಂಡರ್ | 06E16F35265 | 06E15E34326 | PT NO-76/16<br>PF NO-12/16 |
| 10 | KA-11-K-7917 | ವಿಕ್ಟರ್ ಜಿಎಲ್ಎಕ್ಸ್ | N3302F409250 | N3302M400308 | PT NO-76/16<br>PF NO-12/16 |
| 11 | TN-70-A-7639 | ಯಮಹ ಫೇಜರ್ | ME145803X92003053 | 45SKE3DD33D2D | PT NO-76/16<br>PF NO-12/16 |
| 12 | KA-04-EY-5667 | ಹೊಂಡಾ ಆಕ್ಟೀವ | ME4JF211H88031961 | JF21E0044633 | PT NO-81/16<br>PF NO-13/16 |

| ಕ್ರ.ಸಂ. | ವಾಹನದ ಸಂಖ್ಯೆ | ವಾಹನದ ಸ್ವರೂಪ | ಚಾಸೀಸ್ ನಂಬರ್ | ಇಂಜಿನ್ ನಂಬರ್ | ಪಿ.ಎಫ್ ನಂಬರ್ |
|---|---|---|---|---|---|
| 13 | KA-41-R-8798 | ಬಜಾಜ್ ಪಲ್ಸರ್ | MD2DHDJZZTCK68248 | DJGBTK13046 | PT NO-81/16<br>PF NO-13/16 |
| 14 | KA-02-HC-5127 | ಯುನಿಕಾನ್ | ME4KC093F88006009 | KC09E1005825 | PT NO-81/16<br>PF NO-13/16 |
| 15 | KA-05-EF-8801 | ಬಜಾಕ್ ಕ್ಯಾಲಿಬರ್ | DUFBWC59318 | DDMBHC19566 | PT NO-81/16<br>PF NO-13/16 |
| 16 | KA-02-EF-5145 | ಹೊಂಡಾ ಡಿಯೋ | --- | ------- | PT NO-81/16<br>PF NO-13/16 |
| 17 | KA-03-U-9407 | ಕೆನೆಟಿಕ್ ಹೊಂಡಾ | ---- | ---- | PT NO-75/16<br>PF NO-11/16 |
| 18 | KA-02-HU-136 | ಹೀರೋ ಹೊಂಡಾ ಸ್ಲೆಂಡರ್ | 04K16F25800 | 04K15E25869 | PT NO-75/16<br>PF NO-11/16 |
| 19 | KA-02-EM-2236 | ಟಿವಿಎಸ್ ಹೆವಿ ಡ್ಯೂಟಿ ಎಕ್ಸೆಲ್ | MD621BD1741E69148 | 0D1E41154721 | PT NO-75/16<br>PF NO-11/16 |
| 20 | ನಂಬರ್ ಇಲ್ಲ | RX100 | 0164TL506954 | 4T4506954 | PT NO-75/16<br>PF NO-11/16 |
| 21 | KA-04-TY-1211 | ಮಹೇಂದ್ರ ಫ್ಲೈಟ್ | | PFE-CF546628 | PT NO-75/16<br>PF NO-11/16 |
| 22 | KA-05-HJ-9743 | ವಿಕ್ಟರ್ ಜಿಎಕ್ಸ್ | MD625AF194ILI938 | 0F1L40280445 | PT NO-82/16<br>PF NO-14/16 |
| 23 | KA-02-EV-839 | ಬಜಾಜ್ ಪಲ್ಸರ್ | DHVBMH30132 | DHGBMHZ28254 | PT NO-82/16<br>PF NO-14/16 |
| 24 | CKQ-9094 | ಬಜಾಜ್ ಕವಾಸಕಿ | 14841 | 30E015131 | PT NO-82/16<br>PF NO-14/16 |
| 25 | KA-03-U-8864 | ಕೆನೆಟಿಕ್ ಹೊಂಡಾ | ------ | -------- | PT NO-82/16<br>PF NO-14/16 |
| 26 | KA-05-A-9453 | ಆಟೋರಿಕ್ಷ | 96 F1204 | --------- | PT NO-75/16<br>PF NO-11/16 |
| 27 | KA-05-AB-3505 | ಆಟೋರಿಕ್ಷ | MD2AAAZZRWF34228 | ------- | PT NO-82/16<br>PF NO-14/16 |

**PR. 354**

**5TH ADDITIONAL CHIEF METROPOLITAN MAGISTRATE,**
BENGALURU CITY

## ಪೊಲೀಸ್ ಇಲಾಖೆ

**ಪೊಲೀಸ್ ಆಯುಕ್ತರು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ರವರ ನಡವಳಿಗಳು**

**ಉಪಸ್ಥಿತರು :– ಎನ್.ಎಸ್. ಮೇಘರಿಖ್, ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ.**

**ವಿಷಯ :** ದಿನಾಂಕ: 15–04–2016 ರಂದು ಬೆಳಿಗ್ಗೆ 10–00 ಗಂಟೆಯಿಂದ ದಿನಾಂಕ: 16–04–2016ರಂದು ಬೆಳಿಗ್ಗೆ 10–00 ಗಂಟೆಯವರೆಗೆ ಕೇಂದ್ರ ವಿಭಾಗದ ವಿವೇಕನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಬರುವ ಬಾರ್‌ಗಳು, ವೈನ್ಸ್ ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ನಿಷೇಧಿಸುವ ಬಗ್ಗೆ.

**ಉಲ್ಲೇಖ :** 1. ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗರವರ ಕಛೇರಿಯ ಪತ್ರ ಸಂಖ್ಯೆ: ಎಸ್‌ಬಿ/ಬಿಬಿ/83(1) ಡಿಸಿಪಿ (ಕೇಂದ್ರ) 2016, ದಿನಾಂಕ: 13–04–2016.

**ಪ್ರಸ್ತಾವನೆ :–**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಶ್ರೀರಾಮನವಮಿ ಹಬ್ಬದ ಪ್ರಯುಕ್ತ ವಿವೇಕನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿರುವ ಈಜೀಪುರದ ಶ್ರೀ ಕೋದಂಡರಾಮ ದೇವಸ್ಥಾನದಲ್ಲಿ ವಿವಿಧ ಕಾರ್ಯಕ್ರಮಗಳು, ರಾತ್ರಿ ಕರಗ ಮೆರವಣಿಗೆ ಹಾಗೂ ಸುಮಾರು 33 ದೇವರುಗಳ ಹೂವಿನ ಪಲ್ಲಕ್ಕಿ ಉತ್ಸವ ಮೆರವಣಿಗೆ ಕಾರ್ಯಕ್ರಮವನ್ನು ದಿನಾಂಕ: 15–04–2016 ರಿಂದ ದಿನಾಂಕ: 16–04–2016 ರವರೆಗೆ ಹಮ್ಮಿಕೊಂಡಿರುವುದರಿಂದಲೂ,

ಈ ಉತ್ಸವದಲ್ಲಿ ಸುಮಾರು 33 ದೇವರ ಪಲ್ಲಕ್ಕಿ ಉತ್ಸವಗಳು ನಡೆಯಲಿದ್ದು, ಈ ಉತ್ಸವಕ್ಕೆ ನೆರೆಹೊರೆಯ ಪ್ರದೇಶಗಳ ಭಕ್ತಾದಿಗಳು ಸೇರಿದಂತೆ ಸಾವಿರಾರು ಭಕ್ತಾದಿಗಳು ಸೇರುವ ಸಂಬಂಧ ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಶಾಂತಿಯನ್ನು ಕಾಪಾಡುವ ದೃಷ್ಟಿಯಿಂದಲೂ,

ಈ ಸಮಯದಲ್ಲಿ ಕಿಡಿಗೇಡಿಗಳು ಮದ್ಯಪಾನದ ಅಮಲಿನಲ್ಲಿ ದುಷ್ಕೃತ್ಯವನ್ನು ನಡೆಸಿ ಸಮಾಜದ ಶಾಂತಿ ಮತ್ತು ಸುವ್ಯವಸ್ಥೆಯನ್ನು ಹಾಳು ಮಾಡುವ ಸಂಭವವಿರುವುದಾಗಿ ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗ, ಬೆಂಗಳೂರು ನಗರ ರವರ ವರದಿಯಿಂದಲೂ ಹಾಗೂ ಗುಪ್ತ ವಾರ್ತಾ ವಿಭಾಗದ ಮಾಹಿತಿಯಿಂದ ತಿಳಿದುಬಂದಿರುವುದರಿಂದಲೂ,

ಇದಲ್ಲದೆ ನಾನು ಸ್ವತಃ ಪರಿಶೀಲಿಸಲಾಗಿ ಮತ್ತು ಈ ಮೇಲ್ಕಂಡ ಮಾಹಿತಿಗಳ ಬಗ್ಗೆ ಖುದ್ದಾಗಿ ಮಾಡಿದ ವಿಚಾರಣೆಯಿಂದ ಸಾಕಷ್ಟು ಸತ್ಯಾಂಶವಿದೆಯೆಂದು ತಿಳಿದುಕೊಂಡಿದ್ದು ಉತ್ಸವವು ನಡೆಯುವ ಸಮಯದಲ್ಲಿ ಯಾವುದೇ ಅಹಿತಕರ ಘಟನೆಗಳು ನಡೆಯದಂತೆ ತಡೆಯುವ ಉದ್ದೇಶದಿಂದ ಮತ್ತು ಈ ಸಂದರ್ಭದಲ್ಲಿ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ಉಂಟಾಗಿ ಸಾರ್ವಜನಿಕ ಮತ್ತು ಖಾಸಗಿ ಆಸ್ತಿಪಾಸ್ತಿಗಳಿಗೆ ನಷ್ಟ ಉಂಟುಮಾಡುವ ಘಟನೆಗಳನ್ನು ತಡೆಯುವ ಅವಶ್ಯಕತೆಯಿರುವುದರಿಂದಲೂ, ಮುಂಜಾಗ್ರತಾ ಕ್ರಮವಾಗಿ ಕೇಂದ್ರ ವಿಭಾಗದ ವಿವೇಕನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಬರುವ ಬಾರ್‌ಗಳು, ವೈನ್ ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ನಿಷೇಧಿಸುವಂತೆ ಈ ಕೆಳಕಂಡ ಆದೇಶ ಹೊರಡಿಸುತ್ತೇನೆ.

**ಆದೇಶ ಸಂಖ್ಯೆ ಗು.ವಾ/ಎಸ್.ಬಿ./ ಮದ್ಯ ಮಾರಾಟ ನಿಷೇಧಾಜ್ಞೆ/06/2016 ದಿನಾಂಕ: 14–04–2016**

ಈ ದೆಸೆಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಭಾರತೀಯ ದಂಡ ಪ್ರಕ್ರಿಯ ಸಂಹಿತೆಯ ಕಲಂ 144 ಉಪ ಕಲಂ (1) ಮತ್ತು (3)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಎನ್.ಎಸ್. ಮೇಘರಿಖ್, ಭಾ.ಪೊ.ಸೇ ಪೊಲೀಸ್ ಕಮಿಷನರ್, ಬೆಂಗಳೂರು ನಗರ ಆದ ನಾನು ದಿನಾಂಕ: 15–04–2016 ರಂದು ಬೆಳಿಗ್ಗೆ 10–00 ಗಂಟೆಯಿಂದ ದಿನಾಂಕ: 16–04–2016 ರಂದು ಬೆಳಿಗ್ಗೆ 10–00 ಗಂಟೆಯವರೆಗೆ ಬೆಂಗಳೂರು ನಗರದ ಕೇಂದ್ರ ವಿಭಾಗದ ವಿವೇಕನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಬರುವ ಬಾರ್‌ಗಳು, ವೈನ್‌ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟ ಮಾಡದಿರಲು ಪ್ರತಿಬಂಧಕಾಜ್ಞೆಯನ್ನು ವಿಧಿಸಿರುತ್ತೇನೆ. ಈ ಕೆಳಗಿನವುಗಳನ್ನು ಪ್ರತಿಬಂಧಕಾಜ್ಞೆಯಿಂದ ಹೊರತುಪಡಿಸಲಾಗಿದೆ.

- CL–4– ಕ್ಲಬ್ಬುಗಳು,
- CL– 6A- ಸ್ಟಾರ್ ಹೋಟೆಲ್‌ಗಳು,
- CL–**8**– ಮಿಲಿಟರಿ ಕ್ಯಾಂಟೀನ್‌ಗಳು

ಮೇಲ್ಕಂಡ ಆಜ್ಞೆಯನ್ನು ನನ್ನ ಸಹಿ ಮತ್ತು ನನ್ನ ಕಛೇರಿಯ ಮೊಹರಿನಲ್ಲಿ 2016ರ ಏಪ್ರಿಲ್ ಮಾಹೆಯ ದಿನಾಂಕ 14 ರಂದು ಹೊರಡಿಸಿರುತ್ತೇನೆ.

**PR. 355**

**ಎನ್. ಎಸ್. ಮೇಘರಿಖ್**
ಪೊಲೀಸ್ ಆಯುಕ್ತರು
ಬೆಂಗಳೂರು ನಗರ.

## ಪೊಲೀಸ್ ಇಲಾಖೆ

### ಪೊಲೀಸ್ ಆಯುಕ್ತರು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ರವರ ನಡವಳಿಗಳು

**ಉಪಸ್ಥಿತರು :– ಎನ್.ಎಸ್. ಮೇಘರಿಖ್, ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ**

**ಉಲ್ಲೇಖ:** ಅಪರ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರುರವರ ಕಚೇರಿಯ ಪತ್ರ ಸಂಖ್ಯೆ: ಎಂಎಜಿ(4) ಮಿಸ್/ಸಿಆರ್/467/2011–12, ದಿನಾಂಕ: 04–04–2016.

**ಪ್ರಸ್ತಾವನೆ :–**

ದಿನಾಂಕ: 18–04–2016 ರಿಂದ ಬೆಂಗಳೂರಿನ 1) ಬೆಂಗಳೂರು ಪ್ರೌಢಶಾಲೆ, ಆರ್.ವಿ. ರಸ್ತೆ, ಜಯನಗರ 2) ಆರ್.ವಿ. ಬಾಲಕಿಯರ ಪ್ರೌಢಶಾಲೆ, ಆರ್.ವಿ. ರಸ್ತೆ, ಜಯನಗರ 3) ನ್ಯಾಷನಲ್ ಪ್ರೌಢಶಾಲೆ, ಬಸವನಗುಡಿ, ಬೆಂಗಳೂರು 4) ಹೊಂಬೇಗೌಡ ಬಾಲಕರ ಪ್ರೌಢಶಾಲೆ, ವಿಲ್ಸನ್ ಗಾರ್ಡನ್ 5) ರಾಣಿ ಸರಳಾದೇವಿ ಪ್ರೌಢಶಾಲೆ, ಅಶೋಕ ಪಿಲ್ಲರ್ ಹತ್ತಿರ, ಜಯನಗರ 6) ಸೆಂಟ್ ಜಾನ್ ಪ್ರೌಢಶಾಲೆ, ಆರ್.ಪಿ.ಸಿ ಲೇಔಟ್, ವಿಜಯನಗರ 7) ನ್ಯೂ ಕೇಂಬ್ರಿಡ್ಜ್ ಪ್ರೌಢಶಾಲೆ, ಆರ್.ಪಿ.ಸಿ. ಲೇಔಟ್, ವಿಜಯನಗರ 8) ಬೆಂಗಳೂರು ಪ್ರೌಢಶಾಲೆ, ಜಯನಗರ 4ನೇ ಬ್ಲಾಕ್‌ಗಳಲ್ಲಿ ಮಾರ್ಚ್/ಏಪ್ರಿಲ್–2016ನೇ ಸಾಲಿನಲ್ಲಿ ನಡೆದ ಎಸ್.ಎಸ್.ಎಲ್.ಸಿ ಪರೀಕ್ಷೆಗಳ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕಾರ್ಯವು ನಡೆಯಲಿದ್ದು, ಪರೀಕ್ಷಾ ಪಾವಿತ್ರತೆಯನ್ನು ಕಾಪಾಡುವ ಸಲುವಾಗಿ ಮೌಲ್ಯಮಾಪನ ಕೇಂದ್ರಗಳಿಗೆ ಅನಗತ್ಯ ವ್ಯಕ್ತಿಗಳ ಮತ್ತು ಸಾರ್ವಜನಿಕರ ಪ್ರವೇಶವನ್ನು ನಿಷೇಧಿಸುವ ದೃಷ್ಟಿಯಿಂದ ಮೌಲ್ಯಮಾಪನ ಕೇಂದ್ರಗಳು ಇರುವ ಶಾಲಾ ಕಟ್ಟಡಗಳ 200ನ ಮೀಟರ್ ಸುತ್ತಳತೆಯ ಪ್ರದೇಶಗಳನ್ನು ನಿಷೇಧಿತ ಪ್ರದೇಶಗಳೆಂದು ಘೋಷಿಸಿ ಆದೇಶವನ್ನು ಹೊರಡಿಸುವಂತೆ ಉಲ್ಲೇಖಿತ ಪತ್ರದಲ್ಲಿ ಕೋರಿರುವುದರಿಂದಲೂ,

ಹಾಗೂ ಈ ನಿಟ್ಟಿನಲ್ಲಿ ನಾನು ಈ ಮೇಲ್ಕಂಡ ಮಾಹಿತಿಗಳ ಬಗ್ಗೆ ಖುದ್ದಾಗಿ ಮಾಡಿದ ವಿಚಾರಣೆಯಿಂದ ಮತ್ತು ಗುಪ್ತವಾಗಿ ಸಂಗ್ರಹಿಸಿದ ಮಾಹಿತಿಯಿಂದಲೂ ಹಾಗೂ ಗುಪ್ತವಾರ್ತಾ ವಿಭಾಗದ ಮಾಹಿತಿಯಿಂದ ಸಾಕಷ್ಟು ಸತ್ಯಾಂಶವಿದೆಯೆಂದು ತಿಳಿದು ಬಂದಿರುವುದರಿಂದಲೂ, ಈ ಕೆಳಕಂಡಂತೆ ಪ್ರತಿಬಂಧಕಾಜ್ಞೆಯನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ ಎಸ್.ಬಿ./ ಗು.ವಾ/ ನಿಷೇಧಾಜ್ಞೆ/05/2016 ದಿನಾಂಕ: 11–04–2016**

ಈ ದೆಸೆಯಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಗಳ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕಾರ್ಯವು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಡೆಸುವ ಹಿತದೃಷ್ಟಿಯಿಂದ ನನಗೆ ದಂಡ ಪ್ರಕ್ರಿಯಾ ಸಂಹಿತೆಯ ಕಲಂ 144ನೇ ಪ್ರಕರಣದ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಎನ್.ಎಸ್. ಮೇಘರಿಕ್, ಐಪಿಎಸ್, ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಆದ ನಾನು, ದಿನಾಂಕ: 18–04–2016 ರಂದು ಬೆಳಿಗ್ಗೆ 06–00 ಗಂಟೆಯಿಂದ ಮೌಲ್ಯಮಾಪನ

ಕಾರ್ಯ ಮುಕ್ತಾಯವಾಗುವವರೆಗೂ ದಿನದ 24 ಗಂಟೆಗಳ ಕಾಲ ಬೆಂಗಳೂರು ನಗರ ಪೊಲೀಸ್ ಕಮಿಷನರೇಟ್ ವ್ಯಾಪ್ತಿಯ ಮೌಲ್ಯಮಾಪನ ಕಾರ್ಯ ನಡೆಯುವ ಕೇಂದ್ರಗಳಾದ 1) ಬೆಂಗಳೂರು ಪ್ರೌಢಶಾಲೆ, ಆರ್.ವಿ. ರಸ್ತೆ, ಜಯನಗರ 2) ಆರ್.ವಿ. ಬಾಲಕಿಯರ ಪ್ರೌಢಶಾಲೆ ಆರ್.ವಿ. ರಸ್ತೆ, ಜಯನಗರ 3) ನ್ಯಾಷನಲ್ ಪೌಢಶಾಲೆ, ಬಸವನಗುಡಿ, ಬೆಂಗಳೂರು 4) ಹೊಂಬೇಗೌಡ ಬಾಲಕರ ಪ್ರೌಢಶಾಲೆ ವಿಲ್ಸನ್ ಗಾರ್ಡನ್ 5) ರಾಣಿ ಸರಳಾದೇವಿ ಪ್ರೌಢಶಾಲೆ, ಅಶೋಕ ಪಿಲ್ಲರ್ ಹತ್ತಿರ, ಜಯನಗರ 6) ಸೆಂಟ್ ಜಾನ್ ಪ್ರೌಢಶಾಲೆ, ಆರ್.ಪಿ.ಸಿ ಲೇಔಟ್, ವಿಜಯನಗರ 7) ನ್ಯೂ ಕೇಂಬ್ರಿಡ್ಜ್ ಪ್ರೌಢಶಾಲೆ, ಆರ್.ಪಿ.ಸಿ. ಲೇಔಟ್, ವಿಜಯನಗರ 8) ಬೆಂಗಳೂರು ಪ್ರೌಢಶಾಲೆ, ಜಯನಗರ 4ನೇ ಬ್ಲಾಕ್‌ಗಳ 200 ಮೀಟರ್ ಸುತ್ತಳತೆಯ ಪ್ರದೇಶಗಳನ್ನು ನಿಷೇಧಿತ ಪ್ರದೇಶವೆಂದು ಘೋಷಿಸಿ ಪ್ರತಿಬಂಧಕಾಜ್ಞೆಯನ್ನು ವಿಧಿಸಿರುತ್ತೇನೆ.

ಈ ನಡವಳಿಯನ್ನು ನನ್ನ ಸಹಿ ಮತ್ತು ನನ್ನ ಕಛೇರಿಯ ಮೊಹರಿನಲ್ಲಿ 2016ರ ಏಪ್ರಿಲ್ ಮಾಹೆಯ ದಿನಾಂಕ 11 ರಂದು ಹೊರಡಿಸಲಾಗಿದೆ.

**PR. 356**

**ಎನ್. ಎಸ್. ಮೇಘರಿಖ್**
ಪೊಲೀಸ್ ಆಯುಕ್ತರು
ಬೆಂಗಳೂರು ನಗರ.

## KARNATAKA STATE POLICE COMPLAINTS AUTHORITY
## Notification No. SPCA 11 GEN 2014 Dated 22.03.2016

Smt. Mahadevi, Section Officer, Karnataka State Police Complaints Authority (State Authority' in short) is designed as the Public Information Officer under Section 5(1) of the Right to information Act, 2005 (Act' in short) in respect of the State Authority.

Appeals, if any, Under Section 19(1) of the Act shall be before the Deputy Secretary of the State Authority.

This notification is approved by the State Authority in its meeting held on 10.02.2016.

**PR. 357**
**SC. 100**

**S.B. Patgar**
Deputy Secretary to Govt.,
Karnataka State Police Complaints Authority.

## KARNATAKA STATE POLICE COMPLAINTS AUTHORITY
## Notification No. SPCA 12 GEN 2014 dated 22.03.2016

The Following information in repect of the Karnataka State Police Complaints Authority ('Authority' in short) is hereby published under section 4(1) (b) of the Right to Information Act, 2005 ('Act' in short):

1. The Particular of its organization, functions and duties :

(a) The Authority is constituted by the Government of Karnataka under Section 20C (1) of the Karnataka Police Act, 1963 (Act' in short). Its composition is as follows :

(i) A retired High Court Judge as Chairman

(ii) A retired civil servant, not below the rank of principal Secretary to Government, as a member

(iii) A member from Civil Society

(iv) A woman IPS Officer not below the rank of Deputy Insepctor General of police as a member, and

(v) Additional Director General of Police (Grievance) as a Member and Member-Secretary.

(b) Its functions and duties are as stipulated under Section 20C of the Act.

(c) The present incumbents are as follows :-

(i) Chairman : justice (Retd.) Shri M.P. Chinnappa, Former Judge of the High Court of Karnataka.

(ii) Member: shri Abhay Prakash, I.A.S. (Retd.), Former Additional Chief Secretary and Development Commissioner, Government of Karnataka.

(iii) Member: Dr. Sudarshan-H-Ballal, (subject to the judgement in W.P.-32054 of 2014)

(iv) Member: Smt. Malini Krishnamoorthy, I.P.S., Inspector General of Police, karnataka State Reserve Police.

(v) Member and Member Secretary : Shri Sanjay Sahay, I.P.S., Additional Director General of Police.

(d) It is located at room Nos. 36 and 37, Vikasa Soudha, Dr. B.R. Amedkar Veedhi, Bengaluru-560 001. Office Phone no. is 080-22386063.

**2. The powers and duties of its officers and employees:**

The Deputy Secretary. Under the general supervision of the Member-Secretary and overall supervision of the Chairman, is in-charge of the functioning of the office of the Authority which, inter alia, includes follow up action on the decisions of the Authority and assigning the work to the staff in General Section. The Section Officer in the establishment of the Chairman is in-charge of processing of the files of the complaints for the consideration of the Authority, post-decision processing, maintenance of records and any other work assigned by the Chairman. The duty of the staff in the personal section of the Chairman and Member is to carry out the work related to the respective personal establishment.

3. **The procedure followed in the decision making process, including channels of supervision and accountability:** It is laid down in the Karnataka State Police Complaints Authority (Procedure) Regulations, 2014.

**4. The norms set by it for the discharge of its functions:**

The Authority acts as per Section 20C of the Act.

5 **The rules, regulations, instructions, manuals and records held by it or under its control:**

(i) Karnataka Police Complaints Authority (Procedure) Regulations, 2014

(ii) Rules and standing Instrucutions of the Government applicable to service conditions of the Chairman, members, Officers and the Staff of the Authority.

***6*** **A Statement of he categories of documents that are held by it or under its control:**

(i) Files dealing with complaints under Section 20C of the Act.

(ii) Files dealing with meeting of the Authority.

(iii) Files dealing with other general and accounts matters.

(iv) Registers relating to the above mentioned matters.

7. The particulars of any arrangements that exists for consultation with, or representation by the members of public in relation to the formulation of its policy or implementation therof:

The work of this Authority does not involve policy formulation.

**8. A Statement of the boards, councils, committees and other bodies consisting of two or more persons constituted as its part or for the purpose of its advice, and as to whether meetings of those boards, councils, committees and other bodies are open to the public, or the minutes of such meetings are accessible fo public:**

There are no such boards etc. in this Authority,

9. A directory of its officers and employees:

Deputy Secretary: Shri S.B. patgar

Section Officer: Shri S.H. Shivashankara

FDA: Shri.S. Praveen Kumar

Typist: Smt. V.S. Deepika

Data Entry Operator: Smt S. Bharathi

Driver: Shri Mallikarjuna Hugar

Driver: Shri Ramesh I.N.

Motorcycle Orderly: Shri Balarama

Helper Shri S. Srihari and Shri B.k. Kumaraswamy

Phone: Office; 080-22386063

**10. The monthly remuneration received by each of its officers and employees, including the system of compensation as provided in its regulations :**

It is as per the relevant payscale of the post in respect of officers and employees in service. For retired officers and employees on re-employment, it is fixed after adjustment of pension.

**11.** ***The budget allocated to each of its agencies, indication the particulars of all plans, proposed expenditures and reports on disbursements made*****:**

A provision of Rs. 98.00 Lakhs has been made for the State Police Complaints Authority in the State budget for the year 2015-16. Proposed expenditures and disbursement are in accordance with the budget provision. Supplementary provision will be asked for, if necessary.

12. The manner of execution of subsidy programmes, including the amounts allocated and the details of beneficiaries of such programmes :

There are no such programmes in this Authority.

**13. Particulars of recipients of concessions, permits or authorizations granted by it:**

Not applicable

**14. Details in respect of the information, available to or held by It reduced in an electronic form:**

The list of complaints cases is stored and updated in soft format.

**15. The particulars of facilities available to citizens for obtaining information including the working hours of a library or reading room if maintained for public use:**

Information in respective cases is being provided to the complainants as they are entitled to get it. General information about the Authority is also provided whenever asked for. There is no library or reading room maintained for public use.

**16. The names, designation and other particulers of the Public information Officers :**

Public Information Officer under Section 5(1) of the Act:

Smt . Mahadevi, Section Officer

First Appellate Authority under Section 19(1) of the Act:

Shri S.B. Patger, Deputy Secretary.

17. The information as above at sl. nos. 1 to 16 is approved by the State Authority in its meeting held on 10.02.2016.

**PR. 358**
**SC. 100**

**S.B. Patgar**
Deputy Secretary to Govt.,
Karnataka State Police Complaints Authority.

## ಪೊಲೀಸ್ ಇಲಾಖೆ

### ಪೊಲೀಸ್ ಆಯುಕ್ತರು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ರವರ ನಡವಳಿಗಳು

**ಉಪಸ್ಥಿತರು :– ಎನ್.ಎಸ್. ಮೇಘರಿಖ್, ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ**

**ವಿಷಯ:** ದಿನಾಂಕ: 20–04–2016 ರಂದು ಬೆಳಿಗ್ಗೆ 10–00 ಗಂಟೆಯಿಂದ ದಿನಾಂಕ: 21–04–2016 ರಂದು ಮಧ್ಯಾಹ್ನ 01–00 ಗಂಟೆಯವರೆಗೆ ಪೂರ್ವ ವಿಭಾಗದ ಪುಲಿಕೇಶಿ ನಗರ, ಭಾರತೀನಗರ, ಶಿವಾಜಿನಗರ, ಕಮರ್ಷಿಯಲ್ ಸ್ಟ್ರೀಟ್ ಮತ್ತು ಡಿ.ಜೆ. ಹಳ್ಳಿ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಹಾಗೂ ಉತ್ತರ ವಿಭಾಗದ ಜೆ.ಸಿ. ನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಬರುವ ಎಲ್ಲಾ ರೀತಿಯ ಬಾರ್‌ಗಳು, ವೈನ್ಸ್ ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ನಿಷೇಧಿಸುವ ಬಗ್ಗೆ.

**ಉಲ್ಲೇಖ:** ಉಪ ಪೋಲೀಸ್ ಆಯುಕ್ತರು, ಪೂರ್ವ ವಿಭಾಗ ರವರ ಕಛೇರಿಯ ಪತ್ರ ಸಂಖ್ಯೆ: 14/ಬಿಬಿ/ಡಿಸಿಪಿ/ಪೂ/2016, ದಿನಾಂಕ: 12–04–2016.

**ಪ್ರಸ್ತಾವನೆ :–**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಭಾರತೀನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಶ್ರೀ ಮುತ್ಯಾಲಮ್ಮ ದೇವಿಯ ಜಾತ್ರಾ ರಥೋತ್ಸವ ಮತ್ತು ಹೂವಿನ ಪಲ್ಲಕ್ಕಿ ಉತ್ಸವ ಮೆರವಣಿಗೆ ಕಾರ್ಯಕ್ರಮವನ್ನು ದಿನಾಂಕ: 20–04–2016 ರಿಂದ ದಿನಾಂಕ: 21–04–2016 ರವರೆಗೆ ಹಮ್ಮಿಕೊಂಡಿರುವುದರಿಂದಲೂ,

ಈ ಉತ್ಸವದಲ್ಲಿ ಸುಮಾರು 30–35 ದೇವರ ಪಲ್ಲಕ್ಕಿ ಉತ್ಸವಗಳೂ ನಡೆಯಲಿದ್ದು, ಈ ಉತ್ಸವಕ್ಕೆ ನೆರೆಹೊರೆಯ ಪ್ರದೇಶಗಳ ಭಕ್ತಾದಿಗಳು ಸೇರಿದಂತೆ ಸುಮಾರು 20–25 ಸಾವಿರ ಭಕ್ತಾದಿಗಳು ಸೇರುವ ಸಂಬಂಧ ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಶಾಂತಿಯನ್ನು ಕಾಪಾಡುವ ದೃಷ್ಠಿಯಿಂದಲೂ,

ಈ ಸಮಯದಲ್ಲಿ ಕಿಡಿಗೇಡಿಗಳು ಮದ್ಯಪಾನದ ಅಮಲಿನಲ್ಲಿ ದುಷ್ಕೃತ್ಯವನ್ನು ನಡೆಸಿ ಸಮಾಜದ ಶಾಂತಿ ಮತ್ತು ಸುವ್ಯವಸ್ಥೆಯನ್ನು ಹಾಳು ಮಾಡುವ ಸಂಭವವಿರುವುದಾಗಿ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು ನಗರ ರವರ ವರದಿಯಿಂದಲೂ ಹಾಗೂ ಗುಪ್ತವಾರ್ತಾ ವಿಭಾಗದ ಮಾಹಿತಿಯಿಂದ ತಿಳಿದುಬಂದಿರುವುದರಿಂದಲೂ,

ಇದಲ್ಲದೆ ನಾನು ಸ್ವತಃ ಪರಿಶೀಲಿಸಲಾಗಿ ಮತ್ತು ಈ ಮೇಲ್ಕಂಡ ಮಾಹಿತಿಗಳ ಬಗ್ಗೆ ಖುದ್ದಾಗಿ ಮಾಡಿದ ವಿಚಾರಣೆಯಿಂದ ಸಾಕಷ್ಟು ಸತ್ಯಾಂಶವಿದೆಯೆಂದು ತಿಳಿದುಕೊಂಡಿದ್ದು ಉತ್ಸವವು ನಡೆಯುವ ಸಮಯದಲ್ಲಿ ಯಾವುದೇ ಅಹಿತಕರ ಘಟನೆಗಳು ನಡೆಯದಂತೆ ತಡೆಯುವ ಉದ್ದೇಶದಿಂದ ಮತ್ತು ಈ ಸಂದರ್ಭದಲ್ಲಿ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ಉಂಟಾಗಿ ಸಾರ್ವಜನಿಕ ಮತ್ತು ಖಾಸಗಿ ಆಸ್ತಿಪಾಸ್ತಿಗಳಿಗೆ ನಷ್ಟ ಉಂಟುಮಾಡುವ ಘಟನೆಗಳನ್ನು ತಡೆಯುವ ಅವಶ್ಯಕತೆಯಿರುವುದರಿಂದಲೂ, ಮುಂಜಾಗ್ರತಾ ಕ್ರಮವಾಗಿ ಪೂರ್ವ ವಿಭಾಗದ ಪುಲಿಕೇಶಿ ನಗರ, ಭಾರತೀನಗರ, ಶಿವಾಜಿನಗರ, ಕಮರ್ಷಿಯಲ್ ಸ್ಟ್ರೀಟ್ ಮತ್ತು ಡಿ.ಜೆ.ಹಳ್ಳಿ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಹಾಗೂ ಉತ್ತರ ವಿಭಾಗದ ಜೆ.ಸಿ.ನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಬರುವ ಎಲ್ಲಾ ರೀತಿಯ ಬಾರ್‌ಗಳು, ವೈನ್ ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ನಿಷೇಧಿಸುವಂತೆ ಈ ಕೆಳಕಂಡ ಆದೇಶ ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ ಗು.ವಾ/ಎಸ್.ಬಿ. ಮದ್ಯಮಾರಾಟ ನಿಷೇಧಾಜ್ಞೆ/07/2016 ದಿನಾಂಕ: 15–04–2016**

ಈ ದೆಸೆಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಭಾರತೀಯ ದಂಡ ಪ್ರಕ್ರಿಯ ಸಂಹಿತೆಯ ಕಲಂ 144 ಉಪ ಕಲಂ (1) ಮತ್ತು (3)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಎನ್.ಎಸ್. ಮೇಘರಿಖ್, ಭಾ.ಪೊ.ಸೇ. ಪೊಲೀಸ್ ಕಮಿಷನರ್, ಬೆಂಗಳೂರು ನಗರ ಆದ ನಾನು **ದಿನಾಂಕ: 20–04–2016 ರಂದು ಬೆಳಿಗ್ಗೆ 10–00 ಗಂಟೆಯಿಂದ ದಿನಾಂಕ: 21–04–2016 ರಂದು ಮಧ್ಯಾಹ್ನ 1–00 ಗಂಟೆಯವರೆಗೆ** ಬೆಂಗಳೂರು ನಗರದ ಪೂರ್ವ ವಿಭಾಗದ ಪುಲಿಕೇಶಿನಗರ, ಭಾರತೀನಗರ, ಶಿವಾಜಿನಗರ, ಕಮರ್ಷಿಯಲ್ ಸ್ಟ್ರೀಟ್ ಮತ್ತು ಡಿ.ಜೆ.ಹಳ್ಳಿ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಹಾಗೂ ಉತ್ತರ ವಿಭಾಗದ ಜೆ.ಸಿ.ನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಬರುವ ಎಲ್ಲಾ ರೀತಿಯ ಬಾರ್‌ಗಳು, **ವೈನ್ಸ್ ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ಮಾಡದಿರಲು ಪ್ರತಿಬಂಧಕಾಜ್ಞೆಯನ್ನು ವಿಧಿಸಿರುತ್ತೇನೆ.** ಈ ಕೆಳಗಿನವುಗಳನ್ನು ಪ್ರತಿಬಂಧಕಾಜ್ಞೆಯಿಂದ ಹೊರತುಪಡಿಸಲಾಗಿದೆ.

- **CL–4– ಕ್ಲಬ್ಬುಗಳು,**
- **CL– 6A- ಸ್ಟಾರ್ ಹೋಟೆಲ್‌ಗಳು,**
- **CL–8– ಮಿಲಿಟರಿ ಕ್ಯಾಂಟೀನ್‌ಗಳು**

ಮೇಲ್ಕಂಡ ಆಜ್ಞೆಯನ್ನು ನನ್ನ ಸಹಿ ಮತ್ತು ನನ್ನ ಕಛೇರಿಯ ಮೊಹರಿನಲ್ಲಿ 2016ರ ಏಪ್ರಿಲ್ ಮಾಹೆಯ ದಿನಾಂಕ 15 ರಂದು ಹೊರಡಿಸಿರುತ್ತೇನೆ.

**PR. 359**

**ಎನ್. ಎಸ್. ಮೇಘರಿಖ್**
ಪೊಲೀಸ್ ಆಯುಕ್ತರು
ಬೆಂಗಳೂರು ನಗರ.

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ನಅಇ 70 ಬೆಂರೂಪ್ರಾ 2016, ಬೆಂಗಳೂರು, ದಿನಾಂಕ: 07.04.2016.

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 5 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ತುಮಕೂರು ಜಿಲ್ಲೆ, ಶಿರಾ ಪಟ್ಟಣದ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಪ್ರದೇಶಗಳ ಹಾಲಿ ಭೂ ಉಪಯೋಗಗಳ ನಿರ್ಧರಣಾ ದಿನಾಂಕವನ್ನು 01–12–2015 ರಿಂದ ಜಾರಿಗೆ ಬರುವಂತೆ ನಿರ್ಧರಿಸಿ ಈ ಮೂಲಕ ಘೋಷಿಸಲಾಗಿದೆ.

**P.R.360**
**S.C.50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59